ರಮಣೀಮಣಿ

# ಮಲ್ಲಿಕಾ

ಮಧುರಂ ರಸವದ್ವಾಚಿ
ವಸ್ತುನ್ಯಪಿ ರಸಸ್ಥಿತಿಃ ।
ಯೇನ ಮಾದ್ಯಂತಿ ಧೀಮಂತೋ
ಮಧುನೇನ ಮಧುವ್ರತಾ ॥

Ramaneemani in Kannada by 'Mallika'
Published by Lakshmi Prakashana,
7, Langford Road, Bangalore-560 025.

ಪ್ರಥಮ ಮುದ್ರಣ : ೧೯೮೫

ದ್ವಿತೀಯ ಮುದ್ರಣ : ೧೯೮೭



ಬೆಲೆ : ಇಪ್ಪತ್ತು ರೂಪಾಯಿ

ಮುದ್ರಕರು :
ನ್ಯೂ ಐಡಿಯಾಸ್
30, 15ನೇ ಅಡ್ಡರಸ್ತೆ
ಮೂರನೆಯ ವಿಭಾಗ ಜಯನಗರ
ಬೆಂಗಳೂರು - 560 011

“ಶ್ರೀಲೋಕಮಾತಾಪಾದಾರ್ಪಣಮಸ್ತು”

# ರಮಣೀಮಣಿ

**ಮಲ್ಲಿಕಾ**

ಲಕ್ಷ್ಮೀ ಪ್ರಕಾಶನ
7, ಲ್ಯಾಂಗ್ ಫೋರ್ಡ್ ರೋಡ್
ಬೆಂಗಳೂರು—560 025

# ಪರಿವಿಡಿ

# ನಿವೇದನೆ

ಲಕ್ಷ್ಮೀ ಪ್ರಕಾಶನ ಮಾಲಿಕೆಯಲ್ಲಿ ಇಪ್ಪತ್ತೇಳನೆಯ ಪುಷ್ಪವಾಗಿ ಸ್ವೇಚ್ಛೆಯವಾಗಿ ಮೂಡಿದ 'ರಮಣೀಮಣಿ' ಇಂದು ಪುನರ್ಮುದ್ರಣದಲ್ಲಿ ನಲವತ್ತೆರಡನೆಯ ಕುಸುಮವಾಗಿ ಪ್ರಕಾಶಿತವಾಗಿದೆ.

ಸಾವಿರದೊಂಭೈನೂರ ಎಂಭತ್ತನಾಲ್ಕರ ವರ್ಷಮಾನ ನನ್ನ ಹೊಸ ಆರು ಗ್ರಂಥಗಳನ್ನು ಪ್ರಕಾಶಿಸಲು ಸಹಾಯ ಮಾಡಿ ಉಪಕರಿಸಿದೆ. ಎಷ್ಟೋ ವರ್ಷಗಳಿಂದ ಮೂಲೆಗುಂಪಾಗಿದ್ದ ಗ್ರಂಥಗಳು ಬೆಳಕಿಗೆ ಬಂದುದು ನಿಜಕ್ಕೂ ಸಂತಸದ ವಿಷಯ. ಕಳೆದ ವರ್ಷ ಹೊರಬಂದ ಮೊದಲ ಗ್ರಂಥ 'ಐಂದ್ರಕೀರ್ತಿ ಕೇತನಂ' ಎಂಬ ಹಳೆಗನ್ನಡದ ಗದ್ಯ ಕಾವ್ಯ. ನಂತರ 'ಗಗನ ಕುಸುಮ' 'ಜೀವನ ಕುಸುಮ' ಎಂಬ ಭಾವಗೀತೆಗಳ ಕವಿತಾ ಸಂಕಲನ. ಅನಂತರ. ಅನಂತರ 'ಉತ್ತರೋತ್ತರಣಿ' 'ರಾಗಾನುರಾಗಿಣಿ' ಎಂಬ ಸರಳ ರಗಳೆಗಳ ಸಂಜೀವನ ಕಾವ್ಯಮಾಲೆಗಳ ಸಂಕಲನ. ಕೊನೆಯದಾಗಿ "ಶ್ರೀ ಹರ್ಷಲಾ" ಎಂಬ ಕಥಾ ಗುಚ್ಛ.

ಇಂದಿನ ಕಠಿಣ ಪರಿಸ್ಥಿತಿಯಲ್ಲಿ ಪುಸ್ತಕಗಳ ಪ್ರಕಟಣೆ ತುಂಬಾ ಕಷ್ಟದ ಕೆಲಸ. ಬರೆಹಗಾರರ-ಕವಿಗಳ, ಅದರಲ್ಲೂ ಕವಯಿತ್ರಿಯರ ಸಂಕ್ಷೇಮವನ್ನು ಸರಕಾರ ಸ್ವಲ್ಪವಾದರೂ ನೋಡಿಕೊಳ್ಳದಿದ್ದರೆ ತುಂಬಾ ಕಷ್ಟವೇ. ಪ್ರಕಟಿತ ಅತ್ಯುತ್ತಮ ಕೃತಿಗಳಲ್ಲಿ ಒಟ್ಟಿಗೆ ಐನೂರು ಕೃತಿಗಳನ್ನು ಕೊಂಡು ಹೊರೆ ಇಳಿಸದೆ ಹೋದರೆ ಸಾಹಿತ್ಯಬಳ್ಳಿಯ ಕುಡಿ ಮುರುಟಿ ಹೋಗುವುದರೊಂದಿಗೆ ಲೇಖನಿಯ ಮಸಿಯೂ ಆರುವ ಪ್ರಸಂಗ ಬಂದರೆ ಆಶ್ಚರ್ಯವಿಲ್ಲ. ಸರಕಾರ ಮುಂದಾದರೂ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡರೆ ನಮ್ಮ ಪುಣ್ಯ.

ಆಷಾಡ ಬಹುಳ ಪಂಚಮಿ ಬುಧವಾರ

ಮಲ್ಲಿಕಾ
೧೫-೧-೮೫

# ರಮಣೀಮಣಿ

## ೧

'ಯದಸ್ತಿ ಹೃದಯಂ ಮಮ, ತದಸ್ತು ಹೃದಯಂ ತವ'

ಪ್ರದೀಪನ ಕಂಠಶ್ರೀಯಲ್ಲಿ ಹೊರಬಿದ್ದ ಆ ಶ್ಲೋಕ ಕರ್ಣಪಟಲದ ಮೇಲೆ ಪುನಃಪುನಃ ಮೊರೆಯುತ್ತಲೇ ಇರುತ್ತದೆ; ತಾರ್ಕಿಕವಾಗಿ-ಮರ್ಮಾಂತಿಕವಾಗಿ.....ಯದಸ್ತಿ ಹೃದಯಂ ಮಮ, ತದಸ್ತು ಹೃದಯಂ ತವ.....

ರಮಣೀಮಣಿ ಅದನ್ನೆ ಮತ್ತೆ ಮತ್ತೆ ಮೇಲಿಂದಮೇಲೆ ಯೋಚಿಸುತ್ತ ಅವನು ಏತಕ್ಕಾಗಿ ಅದನ್ನು ಬಿತ್ತರಿಸಿದ.....? ಎದೆಯಾಳದಿಂದ ಭಾವಬಂಧುರತೆಯಿಂದ ಹರಿದು ಬಂದ ಸುಮನೋಹರ ವರ್ಣಮಾಲೆಯ ನಿಜ ತಾತ್ಪರ್ಯವನ್ನು ನಾನೇ ನಾನಾಗಿ ತಿಳಿಯಲಾರೆನಾದರೂ ಅವನು ಅಂದುದೇಕೆ ?

ಪ್ರಶ್ನೆಗಳ ಮೇಲೆ ಪ್ರಶ್ನೆಗಳೆದ್ದರೆ ಮನೋಮಂಡಲ ಕೊರೆಯುವ ಯಂತ್ರ ಅಥವಾ ಭೈರಿಗೆ.

ಕೆಲಸ-ಕೆಲಸ ಎಷ್ಟು ಮಾಡಿದರೂ ಮುಗಿಯದ ಕೆಲಸ.

ಹೋಟೆಲಿನಲ್ಲಿ ಬೆಳಿಗ್ಗೆ 'ಹೌಸ್ ಕೀಪರ್' ಅನಂತರ 'ಸರಬರಾಜು ಧಾರಿಣಿ'. ದಿನಂಪ್ರತಿ ಬೆಳಿಗ್ಗೆ ಆರು ಗಂಟೆಗೆ ಹೋಟೆಲಿನಲ್ಲಿರಬೇಕು. ಪುನಃ ಮನೆ ಮುಟ್ಟುವುದು ಸಂಜೆ ಆರು ಗಂಟೆಗೆ.

ಮನೆ.....ರಕ್ಷಣೆ ಕೊಡಬೇಕಾದ ಮನೆ! ಆದರಿಸಬೇಕಾದ ಮನೆ!

ಅದೊಂದು ನರಕ ಕೂಪ!

ಒಂದೇ ಕೊಠಡಿಯ ಆ ಮನೆಯಲ್ಲಿ ಗೋಡೆಗಾರೆಯ ಸಾರಣೆ ದಿನವೂ ಒಂದಲ್ಲ ಒಂದು ಕಡೆ ಕಳಚಿ ಬೀಳುತ್ತಲೇ ಇರುತ್ತದೆ. ತಾಯಿ ಮಣ್ಣು

ತಂದು ಕಲಸಿ ಮೆತ್ತಿ ಕೈಯಿಂದಲೇ ಸಾರಿಸಿ ಹೊಸರೂಪ ಕೊಡಲು ಹವಣಿ ಸುತ್ತಾಳೆ. ಆದರೂ, ಆಗುವುದು ವಿರೂಪ. ಹೊಗೆ ಹಿಡಿದು ಕಪ್ಪು ತಳೆದ ಕಿಷ್ಕಿಂಧೆ. ಬಚ್ಚಲು ಕಿತ್ತು ನೀರು ಹೊರಹೋಗದೆ ನಾರುವ ಪಜೀತಿ. ಒಲೆಯ ಬಳಿ ಒಬ್ಬರಿಗಲ್ಲದೆ ಇಬ್ಬರಿಗಿಲ್ಲ ಸ್ಥಳ. ಆ ಒಂದೇ ಕೊಠಡಿಯಲ್ಲಿ ಇಡೀ ಸಂಸಾರ ಅಡಕಗೊಂಡ ದರ್ಶನ ಘೋರ ನರಕ.

ಹೊಟ್ಟೆಗಿಲ್ಲದಿದ್ದರೂ ನಾಲ್ಕಾರು ಮಕ್ಕಳ ಅವತರಣ. ಒಂದಲ್ಲ ಒಂದು ಮಗು ಕೀರಲು ದನಿಯಲ್ಲಿ ಅಳುತ್ತಲೇ ಇರುತ್ತದೆ. ಅದಿಷ್ಟು ಮಾತ್ರವಾಗಿದ್ದಿದ್ದರೆ ಹೇಗಾದರೂ ಸುಧಾರಿಸಬಹುದಾಗಿತ್ತು.

ಆದರೆ.....ಆ ಕುಡುಕ ತಂದೆ?

ಹಗಲು ದುಡಿದ ಕೂಲಿಯ ಕಾಸೆಲ್ಲಾ ಸಂಜೆಯ ಮೋಜಿಗೆ ವಿನಿ ಯೋಗ. ಮನೆಗೆ ಬಂದನಂತರ ಹೊಡೆತ-ಬಡಿತಗಳ ಘೋರ ಪ್ರಕರಣ. ಹಸು ಮಗುವಿನ ಅಳು, ತಾಯಿಯ ಗೋಳಾಟ, ತಮ್ಮಂದಿರ ಚೀರುದನಿ..... ಅಬ್ಬಾ! ಅದಂತೂ ತಾಳಲಾಗದ-ಸಹಿಸಲಾಗದ ಜೀವ ಸಂಕಟ-ಆತ್ಮ ಸಂಕಟ.

* * * *

ಹೋಟೆಲಿನ ಇಪ್ಪತ್ತೇಳು ಕೊಠಡಿಗಳ ಸಜ್ಜು ಮತ್ತು ಸ್ವಚ್ಛತೆ ಮುಗಿ ಯುವ ಹೊತ್ತಿಗೆ ಗಂಟೆ ಹತ್ತು ಬಾರಿಸಿರುತ್ತದೆ. ಅನಂತರವೇ ಬೆಳಗಿನ ಉಪ ಹಾರಕ್ಕೆ ಬರಬೇಕಾದರೆ. ಅನಂತರ ಗಿರಾಕಿಗಳ ಉಪಹಾರೋಪಚಾರ. ಒಂದು ಗಳಿಗೆಯೂ ಬಿಡುವು ಸಿಗದಷ್ಟು ಕೆಲಸ. ಕಳೆದ ಒಂದು ವರ್ಷದಿಂದ ಕೆಲಸ ಮಾಡುತ್ತಾಳೆ ರಮಣೀಮಣಿ. ಹೇಗೆ ಹೈಸ್ಕೂಲಿನ ಹಂತ ಮುಗಿಯಿ ತೋ.... ಅವರಿವರ ಕೈಕಾಲು ಕಟ್ಟಿ ಕೆಲಸ ಗಳಿಸಿಕೊಂಡಳು ಅವಳು. ಆ ಕೆಲಸ ಕೈಕೊಂಡಾಗಿನಿಂದ ತನ್ನ ಮತ್ತು ತಾಯಿಯ ಕಂಬನಿಯನ್ನು ಕಿಂಚಿತ್ ತೊಡೆಯಬಲ್ಲೆನೆಂಬ ಧೈರ್ಯ ಮೂಡಿದ್ದರೂ ಮನೆಯ ನರಕ ತಪ್ಪಿದ್ದಲ್ಲ. ಈ ಜೀವನಕ್ಕೊಂದು ಹೊಸ ರೂಪು ಕೊಡುವುದು ಹೇಗೆಂಬುದು ಬಗೆಹರಿ ಯದ ಸಮಸ್ಯೆ.

ಬಡತನ.....ಬಡತನ.....ಬಡತನ

ಯಾವತ್ತೂ ದಾರಿದ್ರ್ಯದೇವತೆಯ ಉತ್ತಾಲ ನರ್ತನ. ಎಂದೆಂದಿಗೂ ಕೊನೆಗಾಣದ ಅಕಾಂಡತಾಂಡವ ನರ್ತನ. ಎಲುಬಿನ ಹಂದರಗಳಾದ ಅರೆ

ಹೊಟ್ಟೆಯು- ಅರೆಬಟ್ಟೆಯ ಕಿರಿಯರ ಚೀರ್ದನಿ-ಕರ್ಣದ್ದೇಶವನ್ನು ಕೊರೆಯುವ ಚೀರ್ದನಿ ಯಾವತ್ತೂ ಮನಸ್ಸಿಗೆ ಮುಳ್ಳು ಮುರಿಯುತ್ತಲೇ ಇರುತ್ತದೆ. ತಾಳಲಾರದ ಮನಸ್ಸು-ಭರಿಸಲಾಗದ ಹೃದಯ ಇವುಗಳನ್ನು ಹೊರಲಾರದೇ ಹೊತ್ತ ಕಾಲುಗಳು ಬಳಕುವುದು ಸಹಜ.

ಹಿಂದೂಸ್ಥಾನ ಎಂದಾದರೂ ಈ ರಾಣಾರಂಪವನ್ನು ಸಂಪೂರ್ಣ ತೊಡೆಯುಬಲ್ಲುದೇ ?

ಅದು ತನ್ನ ಮುಂದಿರುವ ಪ್ರಶ್ನೆ.

ಒಂದುವೇಳೆ ಹಿಂದೂಸ್ಥಾನ ತೊಡೆಯುವುದರೊಳಗಾಗಿ ಬಹುಮೂಲ್ಯವಾದ ಆ ಯಜ್ಞಕ್ಕೆ 'ಸಮಿತ್ತು' ಮತ್ತು 'ಹವಿಸ್ಸು' ಆಗಬೇಕಾದುದು ಅಸಂಖ್ಯಾತ ಸ್ತ್ರೀಯರೇ ಅಲ್ಲವೇ ?

ಪ್ರಶ್ನೆಯ ಮೇಲೆ ಪ್ರಶ್ನೆಗಳೆದ್ದು ಮನೋಮಂಡಲವನ್ನು ಭ್ರಮರಗಳಂತೆ ಕೊರೆಯುವುದರಿಂದ ಯಾವತ್ತೂ ಅಶಾಂತಿ-ಅಶಾಂತಿ.

ರಮಣೀಮಣಿ ಆಲೋಚನೆಯಾಳದಲ್ಲಿ ಮುಳುಗಿ ಎಷ್ಟೋವೇಳೆ ಸಮಯಪ್ರಜ್ಞೆ-ಕರ್ಮಪ್ರಜ್ಞೆಗಳನ್ನು ಕಳೆದುಕೊಳ್ಳುವುದೂ ಉಂಟು. ಅನಂತರ ಎಚ್ಚೆತ್ತುಕೊಂಡಾಗ ಅರೆ ! ಏನು ಮಾಡಿಬಿಟ್ಟೆ ? ಎಂಬ ಪ್ರಶ್ನೆ ಏಳುವುದೂ ಉಂಟು. ಎಲ್ಲಿ ಇತರೆಯವರಿಗೆ ತಿಳಿದು ನಗೆಗೀಡಾಗುವೆನೋ ಎಂಬ ಆಲೋಚನೆಯಿಂದ ತನ್ನನ್ನು ತಾನು ಸುಧಾರಿಸಿಕೊಳ್ಳುವುದು ಆಗಾಗ ಸಂಭವನೀಯ.

ಹೋಟಲ್ ಕಾರ್ಮಿಕರಲ್ಲಿ ಬಹುತೇಕ ಮಂದಿ ಪುರುಷವರ್ಗ. ಸ್ತ್ರೀವರ್ಗ ಕೇವಲ ಕೆಲವೇ ಮಂದಿ. ಆದ್ದರಿಂದ ಸ್ವರಕ್ಷಣೆಯನ್ನು ಮುಖ್ಯವಾಗಿ ಗಮನಿಸದಿದ್ದರೆ ಅದೂ ಒಂದು ಮನಸ್ಸಿಗೆ ಮುಜುಗರವೇ.

* * * *

ರಮಣೀಮಣಿ ಅದೇ ತಾನೇ ಮನೆಗೆ ಬಂದಿದ್ದಾಳೆ.

ಬರುವಾಗ ಹೋಟಲಿನಿಂದ ಏನಾದರೂ ಉಳಿಕೆಪಳಿಕೆಯನ್ನು ತರುವುದುಂಟು. ಅವಳು ತರುವ ಆ ತುತ್ತು ಕೂಳಿಗಾಗಿ ಹಲವು ಬಾಯಿಗಳು ಕಾದಿರುತ್ತವೆ. ತನಗೇನೋ ಊಟ ಪುಷ್ಕಳ. ಆ ಕಿರಿಯರ ಸ್ಥಿತಿಯನ್ನು ನೋಡಿದರೆ ಬಿಸಿಲಟ್ಟದ ಮಂಜಿನಂತೆ ಕರಗುತ್ತದೆ ಕಾರುಣ್ಯದ್ರವ್ಯ. ಅವರ

ಗೆಂದೇ ಶ್ರದ್ಧೆವಹಿಸಿ ಸಂಗ್ರಹಿಸಿ ತಂದರೆ ತಲೆಬಾಗಿಲಲ್ಲೇ ಕಾದಿರುವ ಒಡ ಹುಟ್ಟುಗಳು ಚೀಲಕ್ಕೆ ಕಿತ್ತಾಡುವುದನ್ನು ನೋಡಿದರೆ ಒಡಲ್ಲೆಲ್ಲ ಸಂಕಟ. ಅದರಲ್ಲಿ ತಾಯಿಗೊಂದಿಷ್ಟು ಉಳಿಸಿಕೊಳ್ಳಬೇಕೆಂದರೆ ಸಾಹಸ ಪಡಬೇಕು. ಅಂಥ ಕಷ್ಟ ಪರಿಸ್ಥಿತಿ. ಇಂಥ ಬಾಳಾದರೂ ಏಕಿರಬೇಕು ಎಂಬ ಪ್ರಶ್ನೆ ಏಳು ತ್ತಲೇ ಇರುತ್ತದೆ. ಮನಸ್ಸೆಲ್ಲ ಮುಜುಗರ-ಕಳಕಳಿ ಇನ್ನೂ ಏನೇನೋ ....

ತಂದೆ-ರಾಜು ಮನೆಗೆ ಮರಳುವುದು ಜೇಬು ಬರಿದಾದ ಮೇಲೆ. ಹೊಟ್ಟೆ ತುಂಬ ಊಟ ಕೇಳಿಯೇ ಕೇಳುವ. ಇಲ್ಲವೆಂದರೆ ಹೊಡೆತ-ಬಡಿತ. ತಾಯಿ ಅಲ್ಲಿ ಇಲ್ಲಿ ಮುಸುರೆ ತೊಳೆದು ನಾಲ್ಕು ಕಾಸು ತರುತ್ತಾಳೆ. ತಾಯಿ-ಮಗಳ ದುಡಿಮೆಯಲ್ಲಿ ಎಲ್ಲರಿಗೂ ಒಪ್ಪತ್ತೂಟ.

ರಾತ್ರಿ ಹತ್ತರ ಸಮಯ. ರಾಜು ಬಂದು ಬಾಗಿಲು ತಟ್ಟಿದ. ಕದ ತೆಗೆದವಳು ರಮಣೀಮಣಿ. 'ಬಹಳ ಹಸಿವು ಈಗಲೇ ಊಟ ಕೊಡು,' ಎಂದ. ಅವನಿಗಾಗಿ ಊಟವಿಟ್ಟದ್ದು ನಿಜವೆ. ಒಲೆಯ ಬಳಿ ಮುಚ್ಚಿಟ್ಟದ್ದ ತಟ್ಟೆಯನ್ನು ತೆಗೆದು ನೋಡಿದರೆ ಅದು ಯಾವಾಗ ಯಾವ ಹುಡುಗನ ಪಾಲಾಯ್ತೋ ತಿಳಿಯದು. ಒಂದೆರಡು ನಿಮಿಷ ಹೊರಗಡೆ ಗಾಳಿಗೆಂದು ಮೆಟ್ಟಲಿನ ಮೇಲೆ ಕುಳಿತಾಗ ಅದು ಮಕ್ಕಳ ಹೊಟ್ಟೆ ಸೇರಿದೆ. ಇನ್ನು ಮಾಡುವುದೇನು ? ಒಮ್ಮೆಲೇ ತರತರ ನಡುಗಿದಳು ರಮಣಿ.

"ಏನಮ್ಮಾ ಮಾಡಲಿ ?"

"ಹಿಟ್ಟದೆ ಚಪಾತಿ ತಟ್ಟಿಕೊಡುವೆ" ಎಂದಳು ತಾಯಿ.

ಇಬ್ಬರೂ ಅದರ ತಯಾರಿಯಲ್ಲಿರುವಾಗಲೇ ಒಳನುಗ್ಗಿದ ರಾಜು. ನಿಲ್ಲ ಲಾರದಷ್ಟು ತೂರಾಡುತಿದ್ದಾನೆ. ಸುರೆಯ ಅಮಲು. ವಿಕೃತಬುದ್ಧಿ....

"ಕೊಡುತ್ತೀಯೋ ಇಲ್ಲವೋ" ಅಬ್ಬರಿಸಿದ.

"ಊಟ ಇಟ್ಟದ್ದೆ .... ಮಕ್ಕಳು ತಿಂದಿದ್ದಾರೆ .... ಚಪಾತಿ ಮಾಡಿ ಕೊಡುವೆ."

ಅದನ್ನು ಕೇಳುವಷ್ಟು ಸಹನೆ ಇರಬೇಕಲ್ಲ? ಇಬ್ಬರಿಗೂ ಗುದ್ದು ಬಿದ್ದುವು. ಅಳುತ್ತಳುತ್ತಲೇ ಚಪಾತಿ ಒತ್ತಿದಳು ತಾಯಿ. ಅದಕ್ಕೆ ನಂಚಿ ಕೊಳ್ಳಲು ಏನಾದರೂ ಇದ್ದರಷ್ಟೆ...ಚಪಾತಿಯನ್ನು ಹೆದರುತ್ತಲೇ ಅವನ ಮುಂದಿಟ್ಟು ಆಚೆಗೆ ದಾಟದರೆ ಅವನು ಬಿಟ್ಟಾನೆ ? ಆ ಎರಡು ಚಪಾತಿ

ಯಾವಮೂಲೆಗೆ ? ಕುಡಿದ ಹೆಂಡ ಉದರದಲ್ಲಿ ಕಿಚ್ಚೇಳಿಸಿದೆ.....ತಲೆಯಲ್ಲಿ ಉತ್ತಾಲ ನರ್ತನಗೈಯ್ಯುತ್ತಿದೆ.

ಅತೀವ ಕೋಪ-ಉತ್ತಾಪಗಳಿಂದ ಇಬ್ಬರಿಗೂ ಚೆನ್ನಾಗಿ ಬಾರಿಸಿ ಮಲಗಿದ ಮಕ್ಕಳನ್ನು ತುಳಿದು ಚಪಾತಿಯನ್ನು ಒಂದೇ ಬಾಯಿಗೆ ತುರುಕಿ ಹಾಸಿಗೆ ಸೇರಿದ.

ಬೆಳಗಾಗ ಎದ್ದರೆ ಹಾಸಿಗೆಯಲ್ಲಿ ವಮನ ರಾಶಿ.....!

* * * *

"ಅಪ್ಪಾ! ದಿನವೂ ಕುಡಿತ-ಹೊಡೆತ-ಬಡಿತ. ಇದು ಯಾವ ನ್ಯಾಯ? ಕುಡಿಯುವುದನ್ನು ಸ್ವಲ್ಪ ಸ್ವಲ್ಪವಾಗಿ ಕಡಿಮೆ ಮಾಡಿದರೆ ಕಡೆಗೊಮ್ಮೆ ಬಿಟ್ಟುಬಿಡಬಹುದು. ಗಳಿಸಿದ ಕಾಸೆಲ್ಲಾ ಕುಡಿತಕ್ಕಾದರೆ ಉಣ್ಣುವು ದೆಲ್ಲಿಂದ? ಇದನ್ನೆಲ್ಲಾ ಮನಸ್ಸು ತಿಳಿಯಾಗಿದ್ದಾಗ ಯೋಚಿಸಿ ನೋಡು !"

ರಮಣೀಮಣಿ ಸ್ವಲ್ಪ ಧೈರ್ಯದಿಂದಲೇ ಆ ಮಾತು ಹೇಳಿದ್ದಳು.

ಅವನು ತಲೆ ಬಾಗಿದವನು ಎತ್ತಲಿಲ್ಲ, ಉತ್ತರಿಸಲೂ ಇಲ್ಲ. ಹೊರಟು ಹೋದ. ಅವನು ಸ್ನಾನ ಕಂಡು ಎಂದೋ.....ಬಟ್ಟೆ ಒಗೆದು ಎಂದೋ..... ಮನಸು ಬಂದರೆ ಬೀದಿಯ ನಲ್ಲಿಯ ಬಳಿ ಸ್ನಾನ ಮಾಡಿದರೆ ಮುಗಿಯಿತು. ಕಳಚಿದ ಬಟ್ಟೆ ಮನೆಯಲ್ಲಿದ್ದರೆ ತಾಯಿ ಒಗೆದು ಶುಚಿ ಮಾಡುತ್ತಾಳೆ. ಇಲ್ಲದಿದ್ದರೆ ಅದೂ ಇಲ್ಲ. ಮೈಯ್ಯೂ ಕೊಳಕು. ಮನಸ್ಸೂ ಕೊಳಕು.

ಈ ನರಕದ ಬಾಳು ಒಮ್ಮೆ ಮುಗಿಯಬಾರದೇ.....ಎಂದು ಎಷ್ಟೋ ಬಾರಿ ಯೋಚಿಸಿದ್ದಾಳೆ ತಾಯಿ.

ಆದರೆ.....ಆದರೆ !

ಸಾಲಾದ ನಾಲ್ಕು ಮಕ್ಕಳು.....ಇವರಿಗಾರು ಆಸರೆ....? ರಮಣೀ ಮಣಿ ಎಷ್ಟು ಭಾರ ನಿರ್ವಹಿಸಿಯಾಳು ? ಪ್ರಶ್ನೆ ಪ್ರಶ್ನೆಯಾಗಿಯೇ ಉಳಿ ಯುತ್ತದೆ. ದುಃಖದುಗುಡಗಳು ಒಡಲನ್ನು ಕೊರೆಯುತ್ತವೆ. ಬದುಕ ಲಾರದೆ ಬದುಕುವುದು ಅನಿವಾರ್ಯ.

ರಮಣೀಮಣಿ ಸ್ವಲ್ಪ ಯೋಚಿಸಿ ತಾಯಿಗೆಂದಳು "ನಾವು ಎಲ್ಲಾ ದರೂ ಬೇರೆ ಕಡೆ ಒಂದು ಕೊಠಡಿ ಹುಡುಕಿಕೊಂಡು ದೂರ ಹೋಗೋಣ ಎನಿಸುತ್ತೆ. ಈ ಮನೆಯಲ್ಲಿರುವುದರಿಂದಲೇ ಹೊಡೆತ-ಬಡಿತ."

"ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡ ಎನ್ನುತ್ತಾರೆ. ಎ
ದ್ದರೂ ಈ ಮಹಾರಾಯ ಬಿಟ್ಟಾನೆ? ನರಕಕ್ಕೆ ಹೋದರೂ ಹುಡುಕಿಕೊಂಡ
ಬರದಿದ್ದರೆ ಕೇಳು! ಅದರಲಿಲ್ಲಾ ಜಾಣ. ಕುಡಿತ ಬಿಡುವುದು ಸತ್ತಾಗಲೇ!

"ಹಾಗಾದರೆ ಈ ನರಕ ಜೀವನಕ್ಕೆ ಕೊನೆಯೇ ಇಲ್ಲ ?".

"ಇಲ್ಲವೇ ಇಲ್ಲ. ನಾವು ಸತ್ತಾಗಲೇ ಕೊನೆ....."

"ದೇವರೆ ಕಾಪಾಡಬೇಕು"

"ಅವನು ಕಾಪಾಡುವುದಿದ್ದರೆ ಹೀಗಾಗುತಿತ್ತೆ ?"

ರಮಣೀಮಣಿ ಮೌನಧಾರಣೆ ಮಾಡಿದಳು. ಒಡಲಾಳದಲ್ಲಿ
ಸಂಕಟ-ಕಸಿವಿಸಿಗಳ ಅವತರಣವೇ ಅವತರಣ.

* * * *

ರಮಣೀಮಣಿ ಹೋಟೆಲಿನ ಔಟ್ ಹೌಸ್-ನಲ್ಲಿದ್ದ ಕೊಠಡಿಯನ್ನು
ಸಿದ್ಧಪಡಿಸುತ್ತಿದ್ದಾಗಲೇ ಪ್ರದೀಪ್ ಒಳಹೆಜ್ಜೆಯಟ್ಟ.

"ಈಗಷ್ಟೇ ಮ್ಯಾನೇಜರ್ ಹೇಳಿದರು. ನೀವು ಬರುತ್ತೀರಿ ಎಂದು.
ದಯವಿಟ್ಟು ಐದು ನಿಮಿಷ ವರಾಂಡದಲ್ಲಿದ್ದರೆ ನಾನು ಸಜ್ಜುಗೊಳಿಸುವೆ."
ಕೇಳಿಕೊಂಡಳು ರಮಣೀಮಣಿ.

"ಆಗಲಿ....."

ಪ್ರದೀಪ್ ಹೊರಬಂದು ಕುರ್ಚಿಯ ಮೇಲೆ ಕುಳಿತ. ಅವಳೆಂದಂತೆ
ಐದು ನಿಮಿಷಗಳೊಳಗಾಗಿಯೇ ಕೊಠಡಿ ಸಿದ್ಧವಾಯಿತು. ಅವಳು ಹೊರ
ಬಂದು ಕೇಳಿದಳು. "ಈ ಸಲ ಎಷ್ಟು ದಿನ ಇರುತ್ತೀರಿ ಸರ್ ?"

"ಬಹುಶಃ ಎರಡು ತಿಂಗಳು."

"ಹೋದ ಸಲ ಬರೆದ ಕಾದಂಬರಿ ಪ್ರಕಟವಾಯಿತೇ ?"

"ಹೌದು."

"ಈ ಸಲಿಯೂ ಕಾದಂಬರಿ ಬರೆಯುತ್ತೀರಾ ?"

"ಹೌದು...."

"ನೀವು ಆಶುಕವಿಗಳು ! ಕಂಡದ್ದನ್ನು ಕಂಡಂತೆಯೇ ತಕ್ಷಣ ಬರೆಯು
ತ್ತೀರಿ! ನಿಮ್ಮ ಬರವಣಿಗೆ ತುಂಬಾ ಸೊಗಸಾಗಿರುತ್ತೆ....ಓದಿ ತಿಳಿಯಲು
ನನಗೆ ಬಲು ಆಸಕ್ತಿ."

"ಹಾಗಾದರೆ ನನ್ನ ಬರವಣಿಗೆ ಓದಿದ್ದೀ ಅನ್ನು ?"

"ನೀವು ಮೇಜಿನ ಮೇಲಿಟ್ಟಾಗ ಕೆಲವು ಪುಟಗಳನ್ನು ಓದಿರುವೆ. ದಯವಿಟ್ಟು ಕ್ಷಮಿಸಿ."

"ಕಾದಂಬರಿ-ಕವನಗಳನ್ನು ಓದುವುದರಲ್ಲಿ ತಪ್ಪಿಲ್ಲ. ಅದೇನೂ ಗೋಪ್ಯವಸ್ತುವಲ್ಲ."

"ಆದ್ದರಿಂದಲೇ ಓದುವ ಧೈರ್ಯ ಮಾಡಿದೆ."

"ಒಳ್ಳೆಯದು ಓದು....ನಿನಗೇನಾದರೂ ವಿಷಯ ಹೊಳೆದರೆ ತಿಳಿಸು. ಅಗತ್ಯ ಎನಿಸಿದರೆ ಅದನ್ನೂ ಅಳವಡಿಸಿಕೊಳ್ಳಬಹುದು."

ಅವಳು ಮುಗುಳುನಕ್ಕು "ನಾನು ಅಷ್ಟೊಂದು ಶಕ್ತಳೇ ?" ಎಂದಳು ನೆಟ್ಟ ನೋಟವನ್ನು ಕೀಲಿಸದೆ.

"ಶಕ್ತಳಲ್ಲದೇ ನನ್ನ ಸಾಹಿತ್ಯವನ್ನು ಮೆಚ್ಚಿಕೊಳ್ಳುವುದು ಸಾಧ್ಯ ವಾಯಿತೆ ?"

"ಸಾಹಿತ್ಯಾಸಕ್ತಿ ತುಂಬಾ ಇದೆ..... ಆದರೆ, ನಾನು ತುಂಬಾ ಬಡವಿ· ಮುಂದೆ ಓದುವುದು ಸಾಧ್ಯವಿಲ್ಲದೆ ನರಳುವುದಾಗಿದೆ. ಎಂದಿಗೂ ಹೆಣ್ಣಾಗಿ ಹುಟ್ಟಬಾರದು ಬಿಡಿ."

"ಏಕೆ ಹಾಗೆಂದೆ? ಹೆಣ್ಣಿಗೂ ಗಂಡಿಗೂ ಇರಬಹುದಾದ ಅಂತರ ವಾದರೂ ಏನು ? ಇಬ್ಬರೂ ಮನುಷ್ಯರೇ. ಅಂದಮೇಲೆ ಹೆಣ್ಣಾಗಿ ಹುಟ್ಟಿ ದುದರಿಂದ ಹಿಂಜರಿಕೆ ಏಕೆ ?"

'ಕವಯಃ ಕಿಂ ನ ಪಶ್ಯಂತಿ....'

"ಕವಿಗಳು ಯಾವುದನ್ನು ತಿಳಿಯರು; ಯಾವುದನ್ನು ಕಾಣರು ಹೇಳಿ? ಕವಿಗಳು ಕಂಡು-ಕೇಳಿ ತಿಳಿದುದನ್ನಲ್ಲವೇ ಬರೆಯುವುದು ? ಕವಿಗಳ ಮನಃ ಬುದ್ಧಿಗಳು ಬಲು ಸೂಕ್ಷ್ಮ....ಅದಕ್ಕೇ ಅವರಿಗೆ ನೂರಾರು ಕಣ್ಣುಗಳು !..... ಲೋಕಾಚಾರ ನಿಮಗೆ ತಿಳಿಯದೇ? ನೀವು ಬೇಕೆಂತಲೇ ಹೀಗೆನ್ನುತ್ತಿದ್ದೀರಿ!?

ಪ್ರದೀಪ್ ನಕ್ಕುಬಿಟ್ಟ. ಹುಬ್ಬುಗಳು ಏರಿ ಇಳಿದುವು.

"ಪರವಾಯಿಲ್ಲ ನೀನು ಬಹಳ ಬುದ್ಧಿವಂತೆ!"

"ಬುದ್ಧಿ! ಈ ಅಲ್ಪ ಬುದ್ಧಿ ಕಟ್ಟಿಕೊಂಡು ಏನು ಮಾಡಲಿ ಹೇಳಿ ?

ಮುಂದಕ್ಕೆ ಓದಲು ಅವಕಾಶವಿದ್ದಿದ್ದರೆ ಏನಾದರೂ ಮಾಡಬಹುದಿತ್ತು ಈಗ ಏನೂ ಮಾಡಲಾರೆ."

"ಏಕೆ? ಅಷ್ಟೊಂದು ಬಡತನವೇ? ನಿನ್ನ ತಂದೆ ಏನು ಕೆಲಸ ಮಾಡುತ್ತಾರೆ?"

"ಅಯ್ಯೋ, ನಮ್ಮ ಬಾಳೊಂದು ನರಕ....." ಅಷ್ಟೆಂದು ಮ್ಲಾನ ಮುಖಿಯಾದ ಅವಳು ಪುನಃ "ನೋಡಿ ನಿಮ್ಮಂತೆ ತಿಳಿವಳಿಕಸ್ಥರಾಗಿದ್ದಿದ್ದರೆ ನಾವಿಷ್ಟು ಭಂಗ ಬವಣೆ ಅನುಭವಿಸಬೇಕಿತ್ತೆ..... ಎಲ್ಲವೂ ನಮ್ಮ ಜನ್ಮ ಯೋಗ...."

"ಅದು ನಿಜ....ಆದರೂ ನಿನ್ನಿಂದಾದಷ್ಟು ಪ್ರಯತ್ನಿಸು."

"ನನ್ನ ಪ್ರಯತ್ನ ಏನಿದ್ದರೂ ಸಮುದ್ರದಲ್ಲಿ ಶ್ರೀಗಂಧ ತೇಯ್ದಂತೆ"

ಕಣ್ಣುಗಳಲ್ಲಿ ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡಿತು.

* * * *

'ಸ್ಟೋರ್ ಕೀಪರ್' ಶಂಕರ್ ಹೊಸ್ತಿಲನ್ನು ದಾಟುವಾಗ ಬೇಕೆಂತಲೇ ಮೈಗೆ ಮೈಯನ್ನು ತಾಗಿಸಿ "ಏನ್ರೀ ಅಮ್ಮಾವರೆ! ಬಹಳ ಅವಸರ?" ಎಂದ.

ರಮಣೀಮಣಿಗೆ ದುಃಖ-ಕೋಪ ಎರಡೂ ಬಂದುವು. ಬಲಿಷ್ಟರೊಡನೆ ಸಿಟ್ಟು ಸಲ್ಲ ಎಂಬುದು ಮನವರಿಕೆಯಾಗಿದ್ದುದರಿಂದ ನಯನ ಕೋರಕದಿಂದ ಕಡೆಗಣಿಸಿ ನೋಡಿ ಸುಮ್ಮನೆ ಅಲ್ಲಿಂದ ಜಾರಿಕೊಂಡಳು. ಅವನು ಹಿಂದಿಲಿಂದ ಕೂಗಿ ಹೇಳಿದ "ಅಬ್ಬಾ! ಭಲೆ! ಹೆಣ್ಣು! ಪಾಪ, ಎಂದು ಮಾತಾಡಿಸಿದರೆ ಎಷ್ಟು ಜಂಭ! ಇದ್ದರೆ ಹೀಗಿರಬೇಕು ನೋಡು!"

ಅವಳು ಹಿಂತಿರುಗಿ ನೋಡದೆ ತನ್ನ ಕೆಲಸದತ್ತ ಸಾಗಿದಳು.

ಅವಳ ನವತಾರುಣ್ಯ ಭರಿತ ರೂಪು ಸೂಜಿಗಲ್ಲಿನಷ್ಟು ಆಕರ್ಷಕ ಕಾಮುಕರಿಗೆ. ಶಂಕರ್ ಅದರಲ್ಲಿ ಅಗ್ರಗಣ್ಯ. ಜೊತೆಗೆ ಅವನ ಬೆಂಬಲಿಗರು ಇನ್ನಿಬ್ಬರು.

ಎಷ್ಟೋ ಸಲ ಕೆಲಸವೇ ಬೇಡ ಎನಿಸುವಷ್ಟು ಜುಗುಪ್ಸೆ ಮನಸ್ಸಿಗೆ. ಆದರೂ, ಮನೆಯ ರಾಣಾರಂಪ ಮನಸ್ಸಿಗೆ ಕಡಿವಾಣ.....ರಮಣೀಮಣಿ ಒಡಲಾಳದಲ್ಲಿ ಸಂಕಷ್ಟವನ್ನು ತುಂಬಿಕೊಂಡೇ ಕೆಲಸವನ್ನು ಪೂರೈಸುವಳು.

ಹೃದಯರಂಗದಲ್ಲಿ ತತ್ತಳ ತುಳಿಯುವಂತೆ ನರ್ತಿಸುವ ಅಶಾಂತಿಯ ಭೂತವನ್ನು ತೊಡೆದು ಹಾಕುವ ಸಾಮರ್ಥ್ಯವೂ ಇಲ್ಲ. ಮನೆಯಲ್ಲೂ ಹಿಂಸೆ; ಕೆಲಸದಲ್ಲೂ ಹಿಂಸೆ; ಆತ್ಮದ ಹಿಂಸೆ; ಮಾನಸಿಕ ಹಿಂಸೆ.....

ಏನು ಮಾಡಲಿ ? ಹೇಗೆ ಇದರ ಪರಿಹಾರ ? ಎಂಬುದು ಹುಚ್ಚೆದ್ದ ಪ್ರಶ್ನೆ.

ಈ ದುಷ್ಟ ಸಾಮಾಜಿಕ ವಲಯವನ್ನು ದಾಟಿ ಹೋಗುವುದಾದರೂ ಎಲ್ಲಿಗೆ ? ಇದ್ದುದರಲ್ಲೇ ಬದುಕು ಅನಿವಾರ್ಯ. ಬಿಟ್ಟರೆ ಸಾವೊಂದೇ ಪರಿಹಾರ ! ಸತ್ತರೆ ತಾಯಿ ಒಡಹುಟ್ಟುಗಳ ಗತಿ ?

ಆ ಪ್ರಶ್ನೆ ಧುತ್ತೆಂದು ಎದುರು ನಿಲ್ಲುತ್ತದೆ.

ಆದರೆ,

'ಯತ್ ಪೂರ್ವ ವಿಧಿನಾ ಲಲಾಟ ಲಿಖಿತಂ ತತ್ ಮಾರ್ಜಿತು ಕಂ ಕ್ಷಮಃ'

* * * *

ತಾಯಿಯ ಮುಖ ಮೈ ಬಾಸುಂಡೆ ಬರುವಂತೆ ಹೊಡೆದಿದ್ದ ಅಪ್ಪ.

ಅಪ್ಪ ಬಂದೊಡನೆ ಮಕ್ಕಳು ಹೊರಗೋಡುವುದರಿಂದ ಪೆಟ್ಟಿಗೆ ಸಿಕ್ಕುವುದಿಲ್ಲ. ಒಳಗಡೆ ಸಿಕ್ಕುವವಳು ತಾಯಿ ಒಬ್ಬಳೇ. ಅವಳ ಮೈಕೈಯನ್ನು ನೋಡಿದರೆ ಒಡಲೆಲ್ಲಾ ಸಂಕಟ. ಮಾತಾಡಲು ಬಾಯೇ ಬಾರದು.....

ತಾಯಿ ಸೆರಗಿನಿಂದ ಮುಖವನ್ನು ಒರಿಸಿಕೊಳ್ಳುತ್ತಾ ನಿಟ್ಟುಸಿರು ಬಿಟ್ಟು ನುಡಿದಳು "ಈ ಮಕ್ಕಳಿದ್ದಿದ್ದರಿಂದ ನನಗೆ ಈ ಗೋಳು.....ಇಲ್ಲವಾದರೆ ನನಗೇಕೆ ಬೇಕು ಈ ಬಾಳು ? ಎಲ್ಲಾದರೂ ಕೆರೆ-ಬಾವಿ ಕಂಡು ಜೀವಕ್ಕೆ ತಸಿಯೂಡುತ್ತಿದ್ದೆ."

ತಂದೆ ಸಿದ್ದೆಯ ಮಂಪರಿನಲ್ಲಿ "ಕೊಡೋ ಇನ್ನೊಂದು ಶೀಶೆ ! ನಿನ್ನ ಗಂಟೇನೋ ಅದು ?" ಎಂದು ಗೊರ ಗೊರ ದನಿಯಲ್ಲಿ ಅನ್ನುತಿದ್ದ ; ಮತ್ತೆ ಮತ್ತೆ ಪುನಃ ಪುನಃ ಒದರುತಿದ್ದ. ಕೊಠಡಿಯೆಲ್ಲಾ ಸುರೆಯ ದುರ್ವಾಸನೆ..... ತಾಳಲಾಗದ ದುರ್ವಾಸನೆ.

"ಈ ನರಕ ತಪ್ಪುವುದೆಂದಿಗೊ....ಅಥವಾ ಇದರಲ್ಲೆ ಮುಳುಗಿ ಹೋಗುವುದೋ....ಯಾವುದೇ ಇರಲಿ, ಭಗವಂತ ಶೀಘ್ರ ಕೊನೆಗೊಳಿಸಿದರೆ ಜೀವಕ್ಕೆ ತಣ್ಣಗೆ."

ದುಃಖ ಗದ್ಗದಿತ ಕಂಠದಿಂದ ನುಡಿದಳು ತಾಯಿ, ಕಣ್ಣುಗಳಲ್ಲಿ ಗಂ
ಯಮುನೆಯರು ಪ್ರವಹಿಸಿದರು. ಸುತ್ತಮುತ್ತ ಮೈಗೊತ್ತಿ ಕುಳಿ
ಮೂವರು ಮಕ್ಕಳ ಕಣ್ಣಿನಲ್ಲೂ ಬಳಬಳ ನೀರು. ರಮಣೀಮಣಿ ಅತೀ
ದುಃಖಾಬ್ಧಿಯಲ್ಲಿ ಮುಳುಗಿ ಹೋದಳು.

* * * *

ರಮಣೀಮಣಿ ಹೋಟೆಲಿನ ಪರಿಸರದಲ್ಲೆಲ್ಲಾ ಅಲೆದು ಎಲ್ಲಾದರು
ಒಂದು ಚಿಕ್ಕ ಕೊಠಡಿ ಸಿಕ್ಕುವುದಾದರೆ ಸಂಸಾರವನ್ನು ಸದ್ದಿಲ್ಲದೆ ಬದಲ
ಯಿಸುವುದು ಒಳ್ಳೆಯದೆಂದು ಹುಡುಕಿ ಹುಡುಕಿ ಸುಸ್ತಾದಳು. ಎಲ್ಲಿಯೂ
ಅವಳ ಆದಾಯಕ್ಕೊಪ್ಪುವ ಕೊಠಡಿ ಅಲಭ್ಯ.

ಅಂದು ಹೋಟೆಲಿನ ಒಡೆಯರನ್ನು ಕಂಡು ತನ್ನ ಸಂಕಷ್ಟವನ್ನೆಲ್ಲಾ
ಮುಂದಿಟ್ಟು-ವರದಿ ಮಾಡಿ ಹೋಟೆಲಿನ ಹಿಂಭಾಗದಲ್ಲಿರುವ 'ಒಂದು ಚಿಕ್ಕ
ಕೊಠಡಿಯನ್ನು ದಯಮಾಡಿ ಕೊಡಿ' ಎಂದು ಅಂಗಲಾಚಿದಳು. ಕಣ್ಣು
ಗಳಲ್ಲಿ ಕಂಬನಿಯ ಕೋಡಿ ಹರಿಸಿ.

"ಅಮ್ಮ ಇಲ್ಲಿಯ ಕಸ ಮುಸುರೆ ಮಾಡಿಕೊಳ್ಳುತ್ತಾಳೆ. ಹೇಗಾ
ದರೂ ಉಪಕಾರ ಮಾಡಿ" ಮತ್ತೆ ಗೋಗರೆಯಿತು ಅದೇ ದನಿ.

ಯಜಮಾನ ಒಂದೆರಡು ಗಳಿಗೆ ಯೋಚಿಸಿದ. ಆ ಚಿಕ್ಕ ಕೊಠಡಿ
ಯಲ್ಲಿ ಬೇಡದ ವಸ್ತುಗಳನ್ನೆಲ್ಲಾ ತುಂಬಲಾಗಿತ್ತು. ಅದನ್ನು ಖಾಲಿ
ಮಾಡುವುದು ಹೇಗೆ? ಎಂಬುದು ಪ್ರಶ್ನೆ.

"ಅದರಲ್ಲಿ ಬಳಸಬಹುದಾದಂತಹ ವಸ್ತು ಯಾವುದೂ ಇಲ್ಲ.
ಗುಜರಿಗೆ ಹೋಗುವ ಸಾಮಾನು. ಅವನ್ನು ಕೊಟ್ಟರೆ ಖಾಲಿಯಾಗುತ್ತೆ."

"ನೋಡೋಣ, ಅದರಲ್ಲಿ ಏನೆಲ್ಲಾ ಇದೆ ಎಂಬುದೂ ತಿಳಿಯದು.
ಒಮ್ಮೆ ಪರಿಶೀಲಿಸಿ ಹೇಳುವೆ."

ಅಷ್ಟು ದಯೆ ಬಂತಲ್ಲಾ, ಎಂಬುದೊಂದು ಸಣ್ಣ ಸಮಾಧಾನ.
ಕೃತಜ್ಞತೆಯಿಂದ ಕೈಜೋಡಿಸಿ ತನ್ನ ಕೆಲಸಕ್ಕೆ ಹೊರಟಳು. ಮನಸ್ಸೆಲ್ಲಾ
ಮುಂದಿನ ಜೀವನದ ಮೇಲೆ. ಇಬ್ಬರು ತಮ್ಮಂದಿರು ಒಬ್ಬ ತಂಗಿ. ಎಲ್ಲರನ್ನೂ
ಕಡೆ ಹಾಯಿಸಿದರೆ ಈ ಜನ್ಮ ಸಾರ್ಥಕ....ಎನ್ನುತ್ತದೆ ಅಂತರಂಗವಾಣಿ.

* * * *

ಪ್ರದೀಪ್ ತಲೆಬಾಗಿ ಬರೆಯುತ್ತಿದ್ದ. ಬರವಣಿಗೆಯ ಮೇಲೆ ಕೇಂದ್ರೀಕೃತ ಮನಸ್ಸು.

ಕಿರ್ರನೆ ಕದ ತಳ್ಳಿದ ಸದ್ದಾದರೂ ಹಿಂದಿರುಗಿ ನೋಡಲಿಲ್ಲ. ಒಳ ಬಂದವಳು ರಮಣೀಮಣಿ. ದಿನವೂ ಬಾಗಿಲು ತಟ್ಟಿ ಒಳಬರುತಿದ್ದಳಾದರೂ ಇಂದು ತಲೆ ಕೆಟ್ಟಂತೆ ನೇರವಾಗಿ ಒಳಬಂದಿದ್ದಾಳೆ. ತಾನು ಮಾಡಿದ ತಪ್ಪಿನ ಅರಿವಾದುದು ಒಳಬಂದಮೇಲೆ. ಅದೇ ಕ್ಷಣ ಹಿಂದಿರುಗಿ ಹೋಗಲೇ ಎನಿಸಿದಾಗಲೇ ಅವನು ಹಿಂದಿರುಗಿ ನೋಡಿದ. ಅವಳ ಮುಖದಲ್ಲಿ ಮುದ್ರೆಯೊತ್ತಿದ್ದ ಭಯ ಗಂಭೀರತೆಯನ್ನು ಕಂಡುಕೊಂಡ ಪ್ರದೀಪ್ ಭಯನಿವಾರಿಕೆಯ ಸಲುವಾಗಿ "ಏನಮ್ಮಾ ?" ಎಂದ.

ಆ ಮುಹೂರ್ತದಲ್ಲಿ ಏನು ಉತ್ತರಿಸಬೇಕೋ ಅದೇ ಹೊಳೆಯಲಿಲ್ಲ.

"ಏನೂ.....ಇಲ್ಲ." ನುಡಿಯಲಾರದೇ ನುಡಿಯಿತು ನಾಲಿಗೆ.

"ಮತ್ತೇಕೆ ಬಂದೆ ?"

ತಕ್ಷಣವೇ ಆ ಪ್ರಶ್ನೆ ಏಳಬೇಕೆ ? ಬೆಳಿಗ್ಗೆಯೇ ಹಾಸಿಗೆ ಮಾಡಿದ್ದಾಳೆ. ಕುಡಿಯುವ ನೀರು ತಿಂಡಿ ಚಹ ಎಲ್ಲವನ್ನೂ ತಂದುಕೊಟ್ಟಾಗಿದೆ. ಇನ್ನು ಊಟದ ಸಮಯದವರೆಗೆ ಮಾಡುವುದೇನೂ ಇರಲಿಲ್ಲ ಕೂಡ.

"......................"

"ಏನಮ್ಮಾ, ಏಕೆ ಸುಮ್ಮನಾಗಿಬಿಟ್ಟೆ ?"

ಈಗ ಏನಾದರೊಂದು ಹೇಳಲೇಬೇಕಾಯಿತು..... "ನಿಮ್ಮೊಂದಿಗೆ ಸ್ವಲ್ಪ ಮಾತಾಡುವುದಿತ್ತು."

"ಬಾ, ಕುಳಿತುಕೊ....ಏನು ಹೇಳು."

"ನನಗೆ ತುಂಬಾ ಸಂಕೋಚ-ಭಯ. ನೀವೇನೂ ತಿಳಿದುಕೊಳ್ಳುವುದಿಲ್ಲವಾದರೆ...."

"ಇಲ್ಲಪ್ಪಾ. ಅಷ್ಟೇಕೆ ಸಂಕೋಚ ? ನನ್ನನ್ನು ನೀನು ಹೊಸದಾಗಿ ನೋಡುತ್ತಿಲ್ಲವಷ್ಟೆ ?"

"ಆದರೂ, ಹೇಳಿ-ಕೇಳದಷ್ಟು ಸಲಿಗೆ ವಹಿಸುವುದಕ್ಕಾಗುತ್ತದೆಯೆ ?"

"ನನ್ನ ಮಟ್ಟಿಗೆ ಹೇಳುವುದಾದರೆ ಪರವಾಯಿಲ್ಲ."

"ಹಾಗಾದರೆ.....ಹೇ....."

"ಓ! ಆಗಬಹುದು."

ಹುಬ್ಬೆತ್ತಿ ಅವಳನ್ನೇ ನಿಟ್ಟಿಸಿದ. ಅವಳ ಕಣ್ಣುಗಳಲ್ಲಿ ಇಣುಕುತ್ತಿದ ಶೋಕ ಛಾಯೆ ಅಂತಃಸ್ಥಲದಲ್ಲಿ ಕೈಯಾಡಿಸಿತು. ಪ್ರದೀಪ್ ಆಕುಲಿತನಾದ ಮನಸ್ಸು ಮರ್ಮರ ಮರುಗಿತು.

ಅವಳು ತನ್ನ ಸಂಕಷ್ಟವನ್ನು ತೋಡಿಕೊಂಡು "ನಾನು ಯಜಮಾ ರಿಗೆ ಕೇಳಿಕೊಂಡಿರುವೆ, ಹಿಂಬದಿಯಲ್ಲಿರುವ ಚಿಕ್ಕ ಕೊಠಡಿ ಕೊಡಿಯೆಂದು ನೀವು ಅವರಿಗೊಂದು ಮಾತು ಹೇಳುವಿರಾದರೆ....."

"ಅದು ....ಹೇಗೆ ಹೇಳಲಾದೀತು? ನನಗೂ ಇದಕ್ಕೂ ಏನೇನ ಸಂಬಂಧವಿಲ್ಲ. ಅವರೇನಾದರೂ ತಪ್ಪು ತಿಳಿದುಕೊಂಡರೆ.....?"

"ಅದೂ ಕಷ್ಟವೇ...." ಉಗುಳು ನುಂಗಿದಳು ಹುಡುಗಿ. ಹಣೆಯ ಮೇಲೆ ತುಂತುರು ತುಂತುರಾಗಿ ಮೂಡಿದುವು, ಬೆವರಿನ ಹನಿಗಳು ಕರ ವಸ್ತ್ರದಿಂದ ಮುಖವನ್ನು ಒರಸಿಕೊಂಡಳು. ಬಾಗಿದ ತಲೆಯೆತ್ತಲಾಗಲಿಲ್ಲ.

"ನಿನಗೆ ಈ ವಿಚಾರದಲ್ಲಿ ಸಂಪೂರ್ಣ ಸಹಾಯ ಮಾಡುವೆ ಎಂಬ ಭರವಸೆ ಕೊಡಲಾರೆ. ನೀನೇ ನೀನಾಗಿ ಪ್ರಯತ್ನಿಸು. ನಿನಗೆ ಒಳ್ಳೆತಾಗ ಲೆಂದು ಪ್ರಾರ್ಥಿಸುವೆ."

ಅಷ್ಟೆಂದು ಪ್ರದೀಪ್ ಸುಮ್ಮನಾದ. ಮನಸ್ಸು ಬಿಸಿಲಟ್ಟಿದ ಮಂಜಿ ನಂತೆ ದ್ರವೀಭೂತವಾಯಿತು.

* * * *

ಯಜಮಾನ ರಮಣೀಮಣಿಯ ಬಾಡಿದ ಮುಖವನ್ನು ದಿನನಿತ್ಯ ನೋಡುತ್ತಿದ್ದ. ಆ ಕೊಠಡಿಯ ಕಡೆ ದೃಷ್ಟಿ ಹಾಯಿಸಲು ವಿರಾಮ ದೊರೆ ಯದುದರಿಂದ ಅತ್ತ ಹೋಗಲೇ ಇಲ್ಲ.

ವಾರವೊಂದು ಉರುಳಿತು. ಮನೆಯಲ್ಲಿ ಯಥಾಪ್ರಕಾರ ಬವಣೆ-ಭಂಗಗಳ ರಣಗೋಳು.

ಈ ದಿನ ಯಜಮಾನ ಕೊಠಡಿಯ ಬಾಗಿಲು ತೆಗೆಸಿ ನೋಡಿದ. ಅದರಲ್ಲಿ ದ್ದುದು ಮುರಿದ ಪರಿಕರಣಗಳು ಮತ್ತು ಮುರುಕು ಪಾತ್ರೆಗಳು. ಅವ ನ್ನೆಲ್ಲಾ ಹೊರತೆಗೆದು ಮರುಕುಸಾಮಾನಿನ ಅಂಗಡಿಗೆ ಹಾಕಲು ಅಪ್ಪಣೆ ಮಾಡಿದ; ಕೊಠಡಿ ಚಿಕ್ಕದೇ ಆದರೂ ರಕ್ಷಣೆ ಇದೆ. ಓಣಿಯು ಬದಿಯಲ್ಲಿದ್ದು

ದರಿಂದ ಮಕ್ಕಳು ಆ ದಾರಿಯಲ್ಲಿಯೇ ಓಡಾಡಬಹುದು. ಅದರಿಂದ ಗಲಾಟೆ-ಗದ್ದಲಕ್ಕೆ ಅವಕಾಶವಿಲ್ಲ ಎಂಬ ಸಮಾಧಾನ. ಆ ಮ್ಯಾನೇಜರು ಸಾಮಾನು ಖಾಲಿ ಮಾಡಿಸುವುದಕ್ಕೆ ಎಷ್ಟೋ ದಿನಗಳಾದುವು. ಆ ಒಂದೊಂದು ದಿನ ಕಳೆಯುವಾಗಲೂ ಹೃದಯವನ್ನು ಕಾಣದ ಕೈಗಳು ಹಿಸುಕಿದಷ್ಟು ಸಂಕಟ. ಮನವನ್ನು ಗಾಣಕ್ಕೆ ಕೊಟ್ಟಷ್ಟು ಮುಜುಗರ.

ಅಂತೂ ಕೊನೆಗೊಮ್ಮೆ ಖಾಲಿಯಾಯ್ತು.

ಅದರ ಶುಚಿಯ ಕಡೆಗೆ ಗಮನ ಕೊಟ್ಟಾಗಲೇ ಬಾಗಿಲಲ್ಲಿ ಶಂಕರ್ ಕಾಣಿಸಿಕೊಂಡ.

"ಏನು.....? ಇನ್ನು ಮೇಲೆ ಇಲ್ಲಿಯೇ ವಾಸ? ವಾಗ್ದೆವಾ! ಬಲೂ ಮಜ! ನಿನಗೆ ಈ ಕೊಠಡಿ ಕೊಡಿಸಲು ನನ್ನದೇ ಮುಖ್ಯ ಪಾತ್ರ ಎಂಬು ದನ್ನು ನೀನು ನೆನಪಿನಲ್ಲಿಡು! ನನ್ನ ಬಳಿ ಇನ್ನು ಗರ್ವಿಸಬೇಡ!"

"ಅದ್ಹೇಗೆ? ನಾನೇ ನೇರವಾಗಿ ಯಜಮಾನರನ್ನು ಕೇಳಿಕೊಂಡಿರುವೆ. ನಿಮ್ಮ ಬಳಿ ನಾನು ಬಂದೇ ಇಲ್ಲವಲ್ಲಾ?"

"ನೀನು ಕೊಠಡಿ ಕೇಳಿದ್ದು ತಿಳಿದ ಕೂಡಲೇ ನಾನು ಯಜಮಾನರಿಗೆ ಬಹಳವಾಗಿ ಕೇಳಿಕೊಂಡಿರುವೆ. ಇಲ್ಲದಿದ್ದರೆ ನಿನಗೆಲ್ಲಿ ದಕ್ಕುತಿತ್ತು ಈ ಕೊಠಡಿ? ಇದರಲ್ಲಿದ್ದ ಮುರುಕುಪಾತ್ರೆಗಳನ್ನು ಅಂಗಡಿಗೆ ಹಾಕಿದವನು ನಾನೇ! ನಾನು ಕರೆದಾಗ ಒಲ್ಲೆ ಎನ್ನಬೇಡ ತಿಳಿಯಿತೇ?"

"ಅಂದರೆ..........?" ಸಿಟ್ಟಿನಿಂದ ಕೇಳಿದಳು ರಮಣೀಮಣಿ.

"ಏನಾದರೂ ಕೆಲಸ ಹೇಳಿದರೆ ........" ಎಂದು ಮಾತು ತಿರುಗಿಸಿದ.

ಆತನ ಅತೀವ ಕಾಮುಕ ಬುದ್ಧಿ ತಿಳಿದಿದ್ದೆ. ಅವನಿಂದ ಎಷ್ಟು ದೂರ ವಿದ್ದರೆ ಅಷ್ಟು ಕ್ಷೇಮ ಎಂಬುದು ಆತ್ಮಗತ. ಕಣ್ಣುಗಳಲ್ಲಿ ಕೋಪದ ಕಿಡಿ ಯನ್ನು ಕಾರಿದರೂ ಮುಖದಲ್ಲಿ ಸೌಮ್ಯಭಾವದ ಮುಖವಾಡ ತೊಟ್ಟಳು. ಎದೆಯಾಳದಲ್ಲಿ ಹೃದಯ ವ್ಯಾಪ್ತಿಗೆ ಮೀರಿ ಮಿಡಿಯುತ್ತಿದ್ದುದು ಗಮನಕ್ಕೆ ಬಂತು.

ಅವಳು ಜಿಗುಪ್ಸೆಯಿಂದ ಕದವನ್ನು ಮುಚ್ಚಿಕೊಂಡಳು.

* * * *

ಪ್ರದೀಪನ ಕೊಠಡಿಗೆ ಅನ್ನಪಾನಾದಿಗಳನ್ನು ಒಯ್ದು ರಮಣೀಮಣಿ

"ನೀವೀಗ ಉಣ್ಣುತ್ತೀರಷ್ಟೇ? ತಡವಾದರೆ ಊಟ ತಣ್ಣಗಾದೀತು.

"ಆಯಿತು....! ಇಂದೇನು? ಸ್ವಲ್ಪ ಮುಂದಾಗಿ ತಂದಿರುವೆ?"

"ಮಧ್ಯಾಹ್ನ ನನ್ನ ಕೊಠಡಿಯನ್ನು ತೊಳೆದು ಚೊಕ್ಕಟಗೊಳಿಸುವ ಕ್ಕೋಸುಗ ಈಗ ಬೇಗನೆ ಕೆಲಸ ಮುಗಿಸಿಕೊಳ್ಳುವೆ."

"ಒಳ್ಳೆಯದು, ಅಂತೂ, ನಿನಗೊಂದು ಸುಖನೆಲೆ ಸಿಕ್ಕಿತಲ್ಲಾ ಅದೇ ಸಂತೋಷ!"

"ದೇವರು ದೊಡ್ಡವನು!"

"ಇಂದು ಸಂಜೆಯೊಳಗಾಗಿ ನನ್ನ ಕಾದಂಬರಿಯನ್ನು ಮುಗಿಸುವೆ ರಾತ್ರಿ ಒಂದು ಕವನ ಬರೆಯುವುದಿದೆ. ಅದು ಹೆಚ್ಚು ಸಮಯ ತೆಗೆದು ಕೊಳ್ಳದು. ಬೆಳಿಗ್ಗೆ ನಾನು ಇಲ್ಲಿಂದ ಹೊರಡುವೆ. ಬಹುಶಃ ಸಧ್ಯದಲ್ಲೇ ಇದನ್ನು ಅಚ್ಚಿಗೆ ಕೊಡಬಹುದು."

"ಓಹೋ! ಹಾಗಾದರೆ ನೀವು ಪುನಃ ಇಲ್ಲಿಗೆ ಬರುವುದು ಇನ್ನಾವಾಗ?"

"ಹೇಳುವುದು ಕಷ್ಟ. ಏನಿದ್ದರೂ ಈ ಕಾದಂಬರಿಯನ್ನು ಪ್ರಕಟ ಪಡಿಸಿದ ನಂತರವೇ...."

ಆ ಮಾತು ಕೇಳಿ ಅವಳ ಮುಖಬಿಂಬ ಬಾಡಿ ಹೋಯಿತು. ಒಂದೆರಡು ಕ್ಷಣ ತಲೆಬಾಗಿದಳು. ಏನೂ ಹೇಳಲು ಬಾಯಿ ಬಾರದಷ್ಟು ಗಂಟಲಾರಿತು.

"ಏನಮ್ಮಾ ಸುಮ್ಮನಾಗಿ ಬಿಟ್ಟೆ."

"ನೀವು ಹೋಗುವುದಾಗಿ ಹೇಳಿದಮೇಲೆ ನಾನಿನ್ನೇನು ಹೇಳಬಲ್ಲೆ?

ಅವನು ನಗುತ್ತ ಅಂದ "ನಾನು ಹೋಟೆಲಿನಲ್ಲಿ ಎಷ್ಟು ದಿನ ಇರ ಬಲ್ಲೆ....? ಈಗಾಗಲೇ ನಲವತ್ತು ದಿನಗಳು ಕಳೆದುವು. ಮನೆಯಲ್ಲಿ ಸ್ಥಳ ಸಂಕೋಚದಿಂದ ಇಲ್ಲಿ ಬರುತ್ತಿರುವೆ."

"ಈ ಕೊಠಡಿ ಗಲಾಟೆ-ಗದ್ದಲಗಳಿಂದ ದೂರವಿರುವುದರಿಂದ ಬರವಣಿ ಗೆಗೆ ಅನುಕೂಲ. ಇದು ಹೋಟೆಲ್ ಅನಿಸುವುದೇ ಇಲ್ಲ, ಅಲ್ಲವೇ?"

"ಹೌದು ಅದಕ್ಕೆಂದೇ ಇಲ್ಲಿಗೆ ಬರುತ್ತಿರುವೆ. ನಾನಿಲ್ಲಿ ಮೂರು ಪುಸ್ತಕ ಬರೆದಿರುವೆ."

"ನೀವು ಮುಂದೆ ಎಂದಾದರು ದೊಡ್ಡ ಕವಿ ಎನಿಸಿಕೊಳ್ಳಲಿದ್ದೀರಿ!

ನಾನು ದೂರ-ದೂರದಿಂದ ನಿಮ್ಮ ಕೀರ್ತಿ ಪರಿಮಳವನ್ನು ಮನದುಂಬಿ ಕೊಳ್ಳುವೆ. ದೇವರು ನಿಮ್ಮನ್ನು ಚೆನ್ನಾಗಿಟ್ಟಿರಲಿ ಅದೊಂದೆ ನನ್ನ ಪ್ರಾರ್ಥನೆ...." ಕಂಠಾವರೋಧವಾಗಿ ಅಷ್ಟಕ್ಕೆ ಸುಮ್ಮನಾದಳು.

"ಏಕೆ ? ರಮಣೀ ಸಪ್ಪೆಯಾದೆಯಲ್ಲಾ ?"

"ನಿಮ್ಮೊಡನೆ ಒಂದೆರಡು ಮಾತಾಡುವುದರಿಂದಲೇ ನನ್ನ ಸಂಕಟ ಅರುಗಾಗುತಿತ್ತು. ಎಷ್ಟೋಸಲಿ ನಿಮ್ಮಿಂದ ನನ್ನ ಸಂಕಷ್ಟವನ್ನು ಮರೆಯು ತಿದ್ದೆ. ಇನ್ನು ದುಃಖಕ್ಕೆ ಸಾಂತ್ವನ ನೀಡುವರಾರು? ಅದೇ ನನ್ನ ದುಃಖಕ್ಕೆ ಸಂಕಟಕ್ಕೆ ದಾರಿ ಮಾಡುವ ಪ್ರಶ್ನೆ. ನನಗೆ ತಿಳಿದಂತೆ ಯಾರೊಬ್ಬರ ಜೀವ ನವೂ ತುಂಬಿದ ಕೊಡವಾಗಿರಲಾರದು. ಎಲ್ಲರಿಗೂ ಏನಾದರೊಂದು ಕೊರತೆ ಇದ್ದೀತು ಅನಿಸುತ್ತೆ. ಆದರೆ....ನಮಗಿರುವಂತಹ ಸಂಕಷ್ಟ ಯಾರ್‍ಯಾರಿಗೂ ಬರಬಾರದು ನೋಡಿ."

"ನಿನಗಿಂತಲೂ ಹೆಚ್ಚಿನ ತ್ರಾಸಿತರು ಇದ್ದಾರೆ....ದೇವರು ನಿನಗೆ ದೈಹಿಕ-ಮಾನಸಿಕ-ಬೌದ್ಧಿಕ ಆರೋಗ್ಯ ಸಂಪತ್ತಿಯನ್ನು ಕೈತುಂಬ ನೀಡಿ ದ್ದಾನೆ. ಅದಿಲ್ಲದವರು ಎಷ್ಟು ಜನ ಇಲ್ಲ? ಅಂತಹ ಕಷ್ಟ ನಿನಗಿಲ್ಲವಾದು ದರಿಂದ ನೀನು 'ಸುಖಿ' ಎಂದುಕೊ....."

"ನಿಜ....ನಿಜ." ಎಂದ ಅವಳ ಕಣ್ಣುಗಳಲ್ಲಿ ಉಕ್ಕಿಬಂದ ಕಂಬನಿ ಯನ್ನು ಮುಖ ಒರೆಸಿಕೊಳ್ಳುವ ನೆವದಲ್ಲಿ ಒರಿಸಿಕೊಂಡು "ನಿಮ್ಮಂತೆ ಹೀಗೆ ಸಮಯೋಚಿತವಾಗಿ ಧೈರ್ಯ ತುಂಬುವವರು ಯಾರಿದ್ದಾರೆ ? ನಿಮ್ಮ ಪರಿ ಚಯವಾದಾಗಿನಿಂದ ನಿಮ್ಮಂತಹ ಸಮಿಪಾಪ ಬಂಧು ಯಾರಾದರೂ ಇದ್ದಿ ದ್ದರೆ ಎಂದು ಮನಃ ಪ್ರಾಣಗಳು ಹಾತೊರೆಯುತ್ತವೆ. ಅದಕ್ಕೇ...."

"ಅದೇಕೆ ಅರ್ಧಮಾತು ?"

ಸ್ವಲ್ಪ ಹೊತ್ತು ಮೌನಧಾರಣೆ ಮಾಡಿದ ಅವಳು ತಲೆ ಬಾಗಿದಳು. ಕಾಲುಗಳು ಕುಸಿಯುವಷ್ಟು ದೇಹ ಭಾರ.....ಅವಳ ಸ್ಥಿತಿಯನ್ನು ನೋಡಿದ ಅವನು 'ರಮಣೀ' ಎನ್ನುತ್ತ ಎರಡು ಹೆಜ್ಜೆ ಮುಂದುವರಿಯುತ್ತಲೂ ಅವನ ಎದೆಯಲ್ಲಿ ಮುಖವನ್ನು ಹುದುಗಿ ಮುಸು ಮುಸು ಅತ್ತಳು-ಅವಳು.

*　　*　　*　　*

ಮಧ್ಯಾಹ್ನ, ಕೊಠಡಿ ಮತ್ತು ಅದರ ಅಂಗಳದ ಕಸವನ್ನೆಲ್ಲಾ ತೆಗೆದ ಚೊಕ್ಕವಾಡಿ ಕೊಠಡಿಯನ್ನು ತೊಳೆದು ಒರಸಿ ಸಾರಿಸುವುದರಲ್ಲೇ ಕ ಯಿತು. ಅಪ್ಪ ಈ ಒಂದಿನ ಎಷ್ಟು ಹೊಡೆಯುತ್ತಾನೊ ಹೊಡೆಯಲಿ ನಾಳೆಯಿಂದ ಅವನಿಗೆ ಯಾರಿದ್ದಾರೆ? ನಾವಿಲ್ಲಿರುವುದು ಕೂಡ ತಿಳಿಯು ವುದು ಕಷ್ಟವೇ. ಒಂದು ವೇಳೆ ತಿಳಿದರೂ ಇಲ್ಲಿಗೆ ಬರಲು ಸಾಧ್ಯವೇ? ದೇವರೆ ನನಗೆ ಸಹಾಯ ಮಾಡಿದ.... ಪ್ರದೀಪ ನನ್ನೆದೆಯ ಪ್ರದೀಪವ ಆಗಿರುವಾಗ ಇನ್ನೆಲ್ಲಿಯ ಕೊರತೆ? ಈ ಜೀವನವಾಹಿನಿ ಇದೇ ರೀತಿ ಮುಂದು ವರಿದರೆ ಸಾಕಲ್ಲ....ನನಗಿನ್ನೇನು ಬೇಕು?

....ನನಗಿನ್ನೇನು ಬೇಕು?

ಆ ಪ್ರಶ್ನೆ ಕಿವಿಯಾಳದಲ್ಲಿ ಪುನಃ ಪುನಃ ಮೊರೆದು ದೇಹದಾದ್ಯಂತ ಸಂತಸದ ಸ್ಫುರಿಯನ್ನು ಹರಿದಾಡಿಸಿತು, ನ್ಯೆನವಿರು ನಿಮಿರಿ ಪುಳಕಿತ ವಾಗುವಂತೆ. ಹುಟ್ಟಿದಾರಭ್ಯದಿಂದ ಈವರೆಗೆ ಸಂತಸ ಎಂಬುದೇನೆಂಬು ದನ್ನು ಕಂಡುಕೊಂಡಿರಲಿಲ್ಲ. ಇನ್ನು ಮುಂದೆ ಅರೆಹೊಟ್ಟೆ-ಅರೆಬಟ್ಟೆ ಯಾದರೂ ಪರವಾಯಿಲ್ಲ. ಮನಸ್ಸಿಗೆ ನೆಮ್ಮದಿಯಂತೂ ಇರುತ್ತೆ.....

ಮಾನಸ ಮುರಳಿ ಹಾಡುತ್ತಲೇ ಇತ್ತು ; ಹೃದ್ಗಡಲು ಉಕ್ಕೇರು ವಂತೆ.

ಆ ಕೊಠಡಿಗೆ ಒಲೆಯಾಗಲೀ, ಸಾಮಾನು ಇಟ್ಟುಕೊಳ್ಳಲು ಒಂದು ಹಲಗೆಯಾಗಲೀ ಇರಲಿಲ್ಲ. ಮುದುಕ ಮಾಲಿ “ಹಲಗೆ ತಂದು ಹಾಕಿಕೊ ಡುವೆ ನೀನೇನೂ ಚಿಂತೆ ಮಾಡಬೇಡ” ಎಂದು ಎರಡು ಹಲಗೆಗಳನ್ನು ಕೊಂಡುತರಲು ಹೋಗಿದ್ದ. ಸಣ್ಣದೊಂದು ಒಲೆಯನ್ನು ತಾನೇ ಕಟ್ಟಿ ಕೊಡುವುದಾಗಿಯೂ ಹೇಳಿದ್ದಾನೆ. ಇನ್ನೇನು ಇಷ್ಟರಲ್ಲೇ ಬರಬಹುದು ಎಂದುಕೊಳ್ಳುತ್ತ ಕಸ ಎತ್ತುತ್ತಿರುವಾಗ ಅವನು ಬಾಗಿಲಲ್ಲಿ ಕಾಣಿಸಿಕೊಂಡ.

“ಅಮ್ಮಾ! ಜಟಕಾಕ್ಕೆ ಬಾಡಿಗೆ ಕೊಡುತ್ತೀರಾ?”

“ಆಗಲಿ.”

ಅವನಿಗೆ ಹಣ ಕೊಡುವಷ್ಟರಲ್ಲಿ ಗಾಡಿಯವ ಹಲಗೆಗಳನ್ನು ತಂದು ಬದಿಗಿಟ್ಟ. ಅದಕ್ಕೆ ಬೇಕಾದ ಗೂಟ-ಮೊಳೆಗಳು ಇದ್ದುವು.

ಆ ಕೂಡಲೇ ಮಾಲಿ ಕೆಲಸ ಶುರುಮಾಡಿದ. ಅವಳು ಅವನೊಂದಿಗೆ ಕೂಡಿ ಸಹಾಯಕಳಾಗಲು ತಾನೇ ನಿಂತುದರಿಂದ ಕೊನೆಯದಾಗಿ ಪ್ರದೀಪ ನನ್ನು ನೋಡಲು ಸಾಧ್ಯವಾಗಲಿಲ್ಲ. ಅವನು ಬೆಳಿಗ್ಗೆ ಹೋಗುವುದಾಗಿ ಹೇಳಿದ್ದರಿಂದ ಬೆಳಿಗ್ಗೆ ನೋಡಬಹುದು ಎಂದುಕೊಂಡಳು ಹಲಗೆ ಹಚ್ಚಿ ದಾಗಲೇ ಗಂಟೆ ಆರು. ಒಲೆಗೆ ಬೇಕಾದ ಇಟ್ಟಿಗೆ–ಮಣ್ಣುಗಳನ್ನು ಹೊಂದಿಸಿ ಕೊಡುವುದರಲ್ಲಿ ಕತ್ತಲೆ ಕವಿಯುತ್ತ ಬಂದಿತು. ಇನ್ನು ಓಡುತ್ತಲೇ ಮನೆಯ ಹಾದಿ ಹಿಡಿಯ ಬೇಕಾಯ್ತು ರಮಣೀಮಣಿಗೆ.

"ಅಜ್ಜಾ ! ನಿನ್ನ ಉಪಕಾರ ಎಂದೂ ಮರೆಯಲಾರೆ. ಈಗ ನನ್ನ ಕೈಯಲ್ಲಿ ಹಣವಿಲ್ಲ. ಸಂಬಳ ಬಂದೊಡನೆಯೇ ನಿನಗೆ ಹಣಕೊಡುವೆ."

ಅವಳು ಆ ಕ್ಷಣವೇ ಹೊರಟಳು.

ಅವನು ಸಣ್ಣ ಒಲೆಯೊಂದನ್ನು ನಿರ್ಮಿಸಿದನಂತರ ಹೆಚ್ಚಿನ ಮಣ್ಣು ಇಟ್ಟಿಗೆ ಚೂರುಗಳನ್ನು ಹೊರ ಹಾಕಿ "ಪಾಪ! ಹುಡುಗಿ!" ಎಂದುಕೊಂಡ.

* * * *

ಬೆಳಿಗ್ಗೆ ಅವಳು ಬಂದಾಗ ಪ್ರದೀಪನ ಕೊಠಡಿ ತೆರವಾಗಿತ್ತು.

ಅವನು ಮತ್ತೆ ಬರುವನೋ ಇಲ್ಲವೋ ಅದು ತಿಳಿದು ಬರಲಿಲ್ಲ. ಅವನ ಕೊಠಡಿಯ ಬಟ್ಟೆ ಬರೆಗಳನ್ನು ತೆಗೆದು, ಒಗೆದ ದುಪ್ಪಟಿ ದಿಂಬಿನ ಚೀಲ ಟವಲ್ಲು ಕಿಟಕಿಗಳ ಪರದೆ ಮೊದಲಾದುವನ್ನು ಬೇರೆ ಹಾಕುವುದರಲ್ಲಿರು ವಾಗ ಮೇಜಿನ ಮೇಲೊಂದು ಸಣ್ಣ ಚೀಟಿ ಕಂಡು ಬಂತು. ಅದರಲ್ಲಿದ್ದುದು ಒಂದೇ ಪಂಕ್ತಿ.

"ಈಗಲೇ, ಒಂಭತ್ತು ಗಂಟೆಯ ಸಮಯಕ್ಕೆ ನನ್ನನ್ನು ಪದ್ಮಾಲಯದಲ್ಲಿ ಬಂದು ನೋಡು !" ಪ್ರದೀಪನ ಸಹಿ. ಆದರೆ, ಬರವಣಿಗೆ ಅಷ್ಟು ಪ್ರಸ್ಫುಟ ಅನಿಸದು. ಯಾರಾದರೂ ಪ್ರದೀಪನ ಹೆಸರಿನಲ್ಲಿ ಬರೆದು ಮೋಸ ಮಾಡಿರ ಬಹುದೇ ಎಂಬ ಯೋಚನೆಯೂ ಬಂತು. ಆದರೆ, ಹಾಗೆಂದು ಧಿಕ್ಕರಿಸು ವುದು ಸಾಧ್ಯವಿಲ್ಲ; ಏನು ಮಾಡಲಿ ? ಎಂಬ ಪ್ರಶ್ನೆ ಎದ್ದಾಗಲೇ ದೃಷ್ಟಿ ಕಸದ ಬುಟ್ಟಿಯೆಡೆಗೆ ಹರಿಯಿತು. ಅದರೊಳಗಿನ ಕಾಗದಗಳನ್ನು ತಡಕಿ ಅವನ ಹಸ್ತಾಕ್ಷರ ಇರಬಹುದೇ ಎಂದು ನೋಡಿದಳು. ಅದರಲ್ಲಿ ಒಂದು ಅಕ್ಷರವೂ ದೊರೆಯಲಿಲ್ಲ.

ಅಷ್ಟರಲ್ಲಿ ಬಾಗಿಲಲ್ಲಿ ಶಂಕರ ಕಾಣಿಸಿಕೊಂಡ. ಮುಖದ ತುಂಬೆಲ್ಲಾ ನಂಜಿನ ನಗೆ ಹರಿಸಿ, ವ್ಯಂಕುಣಿಸುತ್ತ ಅಂದ "ಚೀಟಿಯನ್ನು ಪ್ರದೀಪ್ ಕೊಟ್ಟದ್ದು ನನ್ನ ಕೈಗೆ. ನಾನೇ ಅದನ್ನು ಮೇಜಿನ ಮೇಲಿಟ್ಟೆ. ನೀನು ಹೇಗೂ ದುಪ್ಪಟಿ ಬದಲಿಸಲು ಬರುತ್ತೀ. ಇಲ್ಲೇ ನೋಡಿಕೊಳ್ಳಬಹುದು ಎಂದು....ನಾನೇ ನಿನ್ನನ್ನು ಪದ್ಮಾಲಯಕ್ಕೆ ಕರೆದೊಯ್ಯಲೇ ?"

"ಬೇಡ; ನಾನೇ ಹೋಗುವೆ," ಎಂದ ಅವಳು ಒಂದೆರಡು ಕ್ಷಣ ಯೋಚಿಸಿ ಯಾವ ಕೊಠಡಿ ಎಂದು ತಿಳಿಸಲಿಲ್ಲವಲ್ಲಾ ?"

"ಒಂಭತ್ತನೇ ಕೊಠಡಿ ನನ್ನೊಂದಿಗೆ ಹೇಳಿದ್ದಾರೆ."

"ಓ ಹಾಗೋ....."

"ಹೇಗೂ ಈವೊತ್ತು ರಜೆಯಲ್ಲಿದ್ದೀಯಷ್ಟೆ ?"

"ಹೌದು ...ನಿನ್ನೆ ಮತ್ತು ಇಂದು ರಜೆ ತೆಗೆದುಕೊಂಡಿರುವೆ. ಹನ್ನೊಂದು ಗಂಟೆಯ ಹೊತ್ತಿಗೆ ಹೋಗಿ ನಮ್ಮ ತಾಯಿಯನ್ನು ಸಾಮಾನು ಸಹಿತ ಕರೆತರಬೇಕು."

"ಅಷ್ಟರೊಳಗಾಗಿ ಹಿಂದಿರುಗಬಹುದಲ್ಲ....."

"ಅಚ್ಛಾ !"

ಅವನು ಹೊರಟ. ಕೊಠಡಿಯನ್ನು ಸಜ್ಜುಗೊಳಿಸಿ ಬೀಗ ಹಾಕಿ ಬೀಗದ ಕೈಯನ್ನು ಆಫೀಸಿನಲ್ಲಿ ಕೊಟ್ಟು ತನ್ನ ಕೊಠಡಿಯ ಬಾಗಿಲನ್ನು ತೆರೆದಿಟ್ಟಳು. ಇದುವರೆಗೆ ಮುಚ್ಚಿದ ಕೊಠಡಿ, ಮುಗ್ಗಲು ವಾಸನೆ ಹೋಗಲಿ ಎಂಬ ಉದ್ದೇಶದಿಂದ.

ಢಣ್. ಢಣ್. ಢಣ್. ಢಣ್ !

ಗಡಿಯಾರ ಎಂಟು ಬಾರಿಸಿತು. ಆಲೈಸಿದರೆ ಅದರಿಂದ ಒಡಕು ಸ್ವರ ಹೊಮ್ಮಿದಂತಾಗಬೇಕೆ? ಯಾಕೋ, ಏನೋ, ಎದೆಯಲ್ಲಿ ಅತೀವ ಅಳುಕು: ಹೋಗಲೋ ಬೇಡವೋ ಎಂಬ ಸಮಸ್ಯೆ. ಆಟೋ ಹಿಡಿದು ಅಲ್ಲಿಗೆ ಹೋಗ ಬೇಕೆಂದರೆ ಅರ್ಧ–ಮುಕ್ಕಾಲು ಗಂಟೆ ಬೇಕೇಬೇಕು. ಪದ್ಮಾಲಯ ಇರುವುದು ನಗರವಲಯದಿಂದ ಆಚೆ. ವಿಶಾಲವಾದ ಬಯಲಿನ ಮಧ್ಯೆ ರಂಜಿಸುವ ಆ ಸುಂದರಮಹಲ್ ಒಂದು ಕಾಲದಲ್ಲಿ ರಾಜಮನೆತನದ ಆಸ್ತಿ. ಅದೀಗ ಸರ

ಕಾರದ ವಶ. ಹೊರದೇಶಗಳಿಂದ ಬರುವ ಪ್ರತಿಷ್ಠಿತರ ತಂಗುದಾಣ. ಪ್ರದೀಪ ಕೆಲವೊಮ್ಮೆ ಅಲ್ಲಿಗೆ ಹೋಗುವುದಾಗಿ ಹೇಳಿಯೂ ಇದ್ದ.

ಆ ಯೋಚನಾಕ್ರಾಂತತೆಯಲ್ಲಿ ಸ್ವಲ್ಪಹೊತ್ತು ಉರುಳಿಹೋಯಿತು. ಅವನು ಹೊರಟು ಹೋಗುವ ಮುನ್ನ ಸಿಕ್ಕಿರಲಿಲ್ಲವಾದುದರಿಂದ ನೋಡಿ ಬರುವುದು ಒಳ್ಳಿತು ಎನ್ನುತ್ತದೆ ಮನಸ್ಸು. ತಾಯಿ ಆಗಲೇ ಸಾಮಾನು ಕಟ್ಟಿ ಕಾಯುತ್ತಿರುತ್ತಾಳೆ.....ಏನಾದರಾಗಲಿ ಪದ್ಮಾಲಯಕ್ಕೆ ಹೋಗಿಯೇ ಬರುವೆ, ಎಂಬ ನಿರ್ಧಾರಕ್ಕೆ ಬಂದಾಗಲೇ ಢಣ್! ಎಂದು ಅರ್ಧಗಂಟೆ ಹೊಡೆಯಿತು.

ಓ! ಎಂಟೂವರೆ! ಇನ್ನು ಸಮಯವೇ ಇಲ್ಲ!

ಓಡುತ್ತಲೇ ಹೊರಹೋದಳು ರಮಣೀಮಣಿ. ಆವ ರುದ್ರ ಪಾಶವೋ ಬಿರುಗಾಳಿಯಂತೆ ಅವಳನ್ನು ಎಳೆದುಕೊಂಡು ಹೋಯಿತು!

* * * *

ಪದ್ಮಾಲಯ!

ವೈಭವೋಪೇತವಾದ ಅರಮನೆ! ಸುತ್ತಮುತ್ತಲೂ ವಿಶಾಲವಾದ ಭೂ ಪ್ರದೇಶ. ದೃಷ್ಟಿಯ ಕಕ್ಷೆಯಲ್ಲಿ ಎಂಥ ಅಮೋಘವಾದ ದೃಶ್ಯ....! ಅಲ್ಲಲ್ಲಿ ಆಲಂಕಾರಿಕವಾಗಿ ಬೆಳಸಿದ ಹೆಮ್ಮರಗಳ ಹಚ್ಚ ಹಸುರಾದ ಗಗನ ಚುಂಬೀ ಶ್ರೇಣಿ. ಸುತ್ತಮುತ್ತ ನಿಟ್ಟಿಸಿ ನೋಡಿ ಕಣ್ಮನಗಳಿಗೆ ರಸಾನ್ನವನ್ನು ತುಂಬಿಕೊಳ್ಳುತ್ತಲೇ ಸಾಲು ಮೆಟ್ಟಿಲುಗಳನ್ನೇರಿದಳು ರಮಣೀಮಣಿ.

ಹೃದಯ ಮೃದಂಗ ವ್ಯಾಪ್ತಿಗೆ ಮೀರಿ ಮಿಡಿಯಿತು ದಡ. ದಡ. ದಡ. ದಡ.

ಜಗಲಿಯನ್ನು ದಾಟಿ ಮೆಲ್ಲಗೆ ಒಳಾವರಣಕ್ಕೆ ಪದಾರ್ಪಣೆ ಮಾಡಿದಾಗ ಸ್ವಾಗತಕಾರಿಣಿಯ ಮುಗುಳು ಮುಖ ಸ್ವಾಗತ ನೀಡಿತು. ಅಃ! ಎಂತಹ ಸೌಮ್ಯಭಾವ ಅವಳದು.

"ಇಲ್ಲಿ ಒಂಭತ್ತನೇ ಕೊಠಡಿ ಯಾವುದು ದಯವಿಟ್ಟು ಹೇಳುವಿರಾ?"

"ಬನ್ನಿ ತೋರಿಸುವೆ."

ಅವಳು ಜಗಲಿಯ ಕೊನೆಯವರೆಗೆ ರಮಣಿಯೊಂದಿಗೆ ಹೋಗಿ ಬಲ ಭಾಗದಲ್ಲಿದ್ದ ಇನ್ನೊಂದು ಚಿಕ್ಕ ಮನೆಯ ಕಡೆ ಕೈ ತೋರಿಸಿ "ಅದೋ, ಆ

ಮನೆಗೆ ಹೋಗಿ. ಬಲಭಾಗದಲ್ಲಿ ಸಾಲಾಗಿನ ಕೊಠಡಿಗಳಲ್ಲಿ ಒಂಭತ್ತನೇ ಕೊಠಡಿ ಕೊನೆಯದು."

"ಗಂಟೆ ಎಷ್ಟು ತಿಳಿಯಬಹುದೇ ?"

"ಒಂಭತ್ತು ಗಂಟೆ. ಹತ್ತು ನಿಮಿಷ."

"ವಂದನೆಗಳು !"

ಅವಳು ಪ್ರತಿವಂದಿಸಿ ಹಿಂದಿರುಗಿದಳು.

ಇದಕ್ಕೂ ಅದಕ್ಕೂ ಸ್ವಲ್ಪ ದೂರವೇ. ಸುತ್ತಮುತ್ತ ಮರಗಳಿರುವ ಮಧ್ಯ ಭೂಮಿಯಲ್ಲಿ ಹೆಂಚಿನ ಶೋಣವರ್ಣದ ಸಣ್ಣ ಗೃಹ.

ರಮಣಿ ಓಡುತ್ತಲೇ ಹೋದಳು. ಸಾಲಾಗಿನ ಕೊಠಡಿಗಳ ಸಂಖ್ಯೆಯನ್ನು ನೋಡುತ್ತ ಹೋದರೆ ಅವಳೆಂದಂತೆ ಒಂಭತ್ತರ ಸಂಖ್ಯೆ ಕೊನೆಯದು. ಮೃದುವಾಗಿ ಕರೆಗಂಟೆ ಒತ್ತಿದಳು.

ಬಾಗಿಲು ತೆರೆಯಿತು. ಬಾಗಿಲ ಹಿಂದೆ ಅವಿತಿದ್ದ ಶಂಕರ್ ಕದವನ್ನು ಹಿಂದೆಯೇ ಮುಚ್ಚಿ ಭದ್ರಪಡಿಸಿದ ! 'ಅಯ್ಯೋ' ಎಂದು ಚೀರುವುದರೊಳಗಾಗಿ ಮೂವರು ಮೈಮೇಲೆ ಧಾಳಿಯಿಟ್ಟರು. ಆ ಭೀಮಶಕ್ತಿಯ ಮುಂದೆ ಇವಳದೇನು ಆಟ ?

ಮೂರು ದಿನಗಳ ನಂತರ ರಮಣೀಮಣಿಯ ಶವ ಬಾವಿಯಲ್ಲಿ ತೇಲುತಿದ್ದುದು ಕಂಡು ಬಂತು !



# ಅವ್ಯಕ್ತ ವೇದನೆ

## ೧

**ಮೂಢಾಃ ಪರಪ್ರತ್ಯಯನೇಯ ಬುದ್ಧಿಃ..........**

ಮಹಮುದ್ ಬ್ಯಾರಿ ಇಡೀ ದಿನ ಆಸ್ಪತ್ರೆಯ ಕಡೆ ಮುಖ ಹಾಕಲಿಲ್ಲ. ಮೂರು ನಾಲ್ಕು ಜನ ಮಕ್ಕಳು ಬಂದು ಹಣಿಕಿ ಹೋಗಿದ್ದರೇನೋ ಹೌದು.

ಆದರೆ.....!

ಅವರಿಗೆ ನೋವು ಏನೆಂಬುದು ಅರ್ಥವಾದೀತೇ ? ಏನೋ, ಬರುವ ರೀತಿಯಲ್ಲಿ ಬಂದರು–ಹೋದರು ಅಷ್ಟೆ. ಹುಡುಗರು ಯಾವತ್ತೂ ಒಂದೇ. ಊಟದ ಹೊತ್ತುಹೊತ್ತಿಗೆ ಹಾಜರ್. ಮಿಕ್ಕಿದ ವೇಳೆಯಲ್ಲಿ ಇನ್ನೆಲ್ಲೋ. ಶಬಾನಾ ಹೊರ ಹೋಗುವ ತಮ್ಮಂದಿರನ್ನು ತಡೆದು “ಅರೆ! ಎಂಥಾ ಮನುಷ್ಯರೋ ನೀವು ? ಅಮ್ಮ ನರಳುತಿದ್ದಾಳೆ........ ನೀವು ಹಣಿಕಿ ಹೋಗುವುದಷ್ಟೇ ?”

“ಸರಿ.........ಸರಿ ! ನಾವೇನು ಅಮ್ಮನಿಗೆ ಹೆತ್ತುಕೊಡುವುದಕ್ಕಾಗುತ್ತದೆಯೆ ?”

“ಹೊತ್ತವರು ಹೆರಲೇಬೇಕು. ಅದಕ್ಕೇನು ಮಾಡೋಣ ?”

“ಅಮ್ಮನಿಗೆ ಇದೇನು ಹೊಸದೇ ? ನಾವೇಕೆ ಕಾದು ಕುಳಿತಿರಬೇಕು?”

“ಹತ್ತು ಹೆತ್ತವಳಿಗೆ ಹನ್ನೊಂದನೆಯದೇನು ಕಷ್ಟ ?”

ಆ ಆಯಾಗಳು, ವಾರ್ಡ್‌ಬಾಯ್‌ಗಳು ನರ್ಸ್‌ಗಳು ಎಲ್ಲರ ಮುಂದೆ ಇಷ್ಟೊಂದು ತಾತ್ಸಾರವಾಗಿ ಹೊರಬಿದ್ದ ಹಲವು ಬಾಯಿಗಳ ಹಲವು ಮಾತುಗಳು ಕಿವಿಯನ್ನು ಕೊರೈಸಿದುವು. ಆ ತಮ್ಮಂದಿರು ಇಲ್ಲಿರುವುದಕ್ಕಿಂತ ಹೊರಹೋಗುವುದೇ ಲೇಸು ಎನಿಸಿತು ಶಬಾನಾಳಿಗೆ. ನೊಂದ ಮನದಿಂದ ಒಳಹೋಗಿ ಬೆಂಚಿನ ಮೇಲೆ ಕುಳಿತುಕೊಂಡಳು.... ತಾಯಿ ಫಾತೀಮಾಳನ್ನು

ಲೇಬರ್ ವಾರ್ಡಿಗೆ ಕರೆದುಕೊಂಡು ಹೋಗಿ ಆಗಲೇ ಎರಡು-ಮೂರು ತಾಸುಗಳು ಉರುಳಿದುವು. ಆರೋಗ್ಯ ಸರಿಯಾಗಿಲ್ಲವೆಂದು ಹಿಂದೆರಡು ಬಾರಿ ತಿಂಗಳಾನುಗಟ್ಟಳೆ ಆಸ್ಪತ್ರೆಯಲ್ಲಿ ಇದ್ದು ಹೋಗಿದ್ದಳು. ಈ ಸಲಿ ಬಂದು ಒಂದು ವಾರವೇ ಕಳೆದಿತ್ತು. ಈ ಹಗರಣದಿಂದಾಗಿ ಶಬಾನಾಳ ಓದಿಗೆ ಸಂಚಕಾರ. ಬಹಳ ಕಷ್ಟದಿಂದ ಕಾಲೇಜು ಹಂತದವರೆಗೆ ಬಂದಿದ್ದರೂ ಅದನ್ನು ಪೂರೈಸಲಾಗಲಿಲ್ಲ.

ತಾಯಿ ಹೊಸ ಮಗುವಿಗಾಗಿ ಹಳೆ ಮಗುವನ್ನು ಮಗಳ ಕಡೆಗೆ ನೀಡುತ್ತಿದ್ದುದು, ಒಂದಲ್ಲ ಒಂದು ಮಗು ತೊಟ್ಟಿಲಲ್ಲಿರುತ್ತಿದ್ದುದು, ಪುನಃ ಪುನಃ ಗಂಡುಮಕ್ಕಳೇ ಹುಟ್ಟಿ, ಮನೆ ಪುಂಡರ ಕೂಟವಾದುದು ಮಗಳ ಮನಸ್ಸಿಗೆ ಕಿರಿಕಿರಿ. ಈ ಸಲ ಬರುವ ಮಗುವಾದರೂ ಹೆಣ್ಣಾದರೆ...?

ಗೋಡೆಯ ಮೇಲಿದ್ದೊಂದು ಹಲ್ಲಿ ನುಡಿಯಿತು ಲೊಚ. ಲೊಚ. ಲೊಚ. ಲೊಚ.

ಓ! ಅಲ್ಲಾ ನೀನೇ ಕರುಣೆದೋರು!

ಶಬಾನಾ ಪುನಃ ಪುನಃ ಬೇಡಿಕೊಂಡಳು ದೂರದಲ್ಲೆಲ್ಲೊ ಮರದ ನೆತ್ತಿಯ ಮೇಲೆ ಕುಳಿತ ಕೋಗಿಲೆಯೊಂದು ಕೂಗಿತು ಕೂಊಊವೂಊ! ಕೂಊಊವೂಊ!

ಓ! ಕೋಗಿಲೆಯೇ! ನಿನ್ನ ದನಿಯಲ್ಲಿ ನನ್ನ ಮೊರೆ ಅಲ್ಲಾನಿಗೆ ಮುಟ್ಟಲಿ!

ಕೋಗಿಲೆ ಪುನಃ ಕೂಗಿತು ಕೂಊಊವೂಊ! ಕೂಊಊವೂಊ

* * * *

ಈ ಸಲ ಫಾತೀಮಾ ಹೆತ್ತದ್ದು ಹೆಣ್ಣುಮಗು ಆದುದರಿಂದ ಶಬಾನಾ ಸಂತಸಪಟ್ಟಳೇನೋ ಹೌದು! ಆದರೆ, ಆ ತಾಯಿ ಕಷ್ಟಪಟ್ಟ ಬಗೆ ಕರಳು ಕೊರೆಯುವಷ್ಟು ಸಂಕಟ. ಆಸ್ಪತ್ರೆಯ ಆರೈಕೆಯಿಲ್ಲದಿದ್ದರೆ ಅವಳು ಬದುಕುತ್ತಿರಲಿಲ್ಲ ಕೂಡಾ. ಅಂತೂ ಅಲ್ಲಾನ ದಯೆಯೂ ಕೂಡಿ ಬಂತು.

ಫಾತೀಮಾ ಬಹಳ ನಿತ್ರಾಣಿಯಾದುದರಿಂದ ಆಸ್ಪತ್ರೆಯಲ್ಲೇ ಕೆಲವು ದಿನ ಇರಬೇಕಾಯಿತು. ಯಾವಾಗಾದರೊಮ್ಮೆ ಮಹಮದ್ ಬ್ಯಾರಿ ಬಂದು

ಹೋಗುತಿದ್ದ. ಹುಡುಗರೂ ಬಂದು ಹೋಗುತಿದ್ದರು. ಯಾರು ಬಂದರೂ ಸಂಕಟ–ಸಂಕಷ್ಟಗಳು ತಾಯಿ–ಮಗಳ ತಲೆಗೆ.

ಶಬಾನಾ ಮನೆಯಲ್ಲಿ ಅಡಿಗೆ ಮಾಡಿ ಆಸ್ಪತ್ರೆಗೆ ಊಟ ಒಯ್ಯುತ್ತಿದ್ದಳು. ಆ ಬುರುಕ ಸಹಿತ ಓಡಾಡುವಾಗ ಕ್ಯಾರಿಯರ್ ಮತ್ತೊಂದು ಮಗದೊಂದು ಕೊಂಡು ಹೋಗುವ ಕಷ್ಟ ಅವಳಿಗೇ ಗೊತ್ತು. ಯಾಕಾದರೂ ಹೆಣ್ಣಾಗಿ ಹುಟ್ಟಿದೆನೋ ಎಂದು ಕೊರಗುತಿತ್ತು ಜೀವ. ಕಣ್ಣುಗಳು ಮತ್ತೆ ಮತ್ತೆ ತೊಯ್ಯುತಿದ್ದುವು. ಮನಃಚಿತ್ತಗಳು ಕರಗಿ ದ್ರವಿಸುತಿದ್ದುವು.

ಹಿರಿಯಣ್ಣನಾದ ಸೈಯದ್ ಬ್ಯಾರಿ ದೊಡ್ಡವನೇ. ಕಣ್ಣಿದ್ದೂ ಕುರುಡನಾದ ಅವನು ಬಂದರೇನೇ ಬೇಸರ ಎನಿಸುವಷ್ಟು ಜುಗುಪ್ಸೆ. ಮನುಷ್ಯರಾಗಿಯೂ ಮಾನವತೆ ಇಲ್ಲದ ಹುಂಬರು. ಅವಳು ಮೆಟ್ಟಿಲಿಳಿಯುವ ಮುಂಚೆಯೇ 'ಬುರುಕ ಸರಿಯಾಗಿ ಹಾಕಿಕೊ' ಎಂದು ಒರಟು ದನಿಯಲ್ಲಿ ಗದರಿಸುತಿದ್ದ. ತಂದೆ–ಮಹಮದ್ ಬ್ಯಾರಿಯೂ ಅಷ್ಟೆ; ಬೆಳೆದ ಮಗಳೆಂದೂ ಜಗಲಿಯ ಹಜಾರಕ್ಕೆ ಬರಲೇಬಾರದು ಎಂಬ ಕಟ್ಟುನಿಟ್ಟು. ಬಂದರೆ ಕೆಂಗಣ್ಣುಗಳಿಂದ ದುರುಗುಟ್ಟಿ ಗದರಿಸುತಿದ್ದ. ಈ ಎಲ್ಲಾ ಗಂಡಸರ 'ಗಂಡಸುತನ' ದಿಂದ ಬೇಸತ್ತು ಒಂದು ಹೆಣ್ಣು ಮಗು ಬರಲಿ ಎಂದು ಬಯಸಿದ್ದು ಸರಿಯೆ. ಮುಂದೆ ಆ ಹೆಣ್ಣು ಮಗುವೂ ಇಂತಹ ಕಷ್ಟವನ್ನೇ ಅನುಭವಿಸಬೇಕಲ್ಲಾ ಎಂಬ ಯೋಚನೆ ಬಂದಾಗ ಮರ್ಮರ ಮರುಗುತ್ತದೆ ಮನಸ್ಸು. ಕರುಳ ಬಳ್ಳಿಯಲ್ಲಿ ಕಣ್ಣೀರು ತಟತಟನೆ ಸಂಜನಿಸುತ್ತದೆ.

ಕಿಟಕಿ–ಬಾಗಿಲುಗಳು ಮುಚ್ಚಿದ ಮನೆ. ದಪ್ಪ ಪರದೆಯಿಂದ ಮುಚ್ಚಿದ ಹಜಾರದ ಬಾಗಿಲು. ಸುತ್ತಲೂ ಎತ್ತರವಾದ ಗಿಡಮರ ಬೇಲಿಗಳಿಂದ ಆವೃತವಾದ ಪ್ರಾಕಾರ. ಎಲ್ಲಿಯೂ ಹಣುಕುವಂತಿಲ್ಲ. ಹೊರ ಪ್ರಪಂಚ ನೋಡಬೇಕೆಂದರೆ ರಸ್ತೆಗೇ ಇಳಿಯಬೇಕು. ಈ ತಾಳಲಾರದ ಸಂಕಷ್ಟ ಯಾರಿಗೂ ಬೇಡ ಎಂದುಕೊಳ್ಳುತ್ತಾಳೆ ಶಬಾನಾ. ಕಾಲೇಜಿನ ಹಂತವನ್ನು ಪೂರೈಸುವ ಆಸೆ ಮನದಲ್ಲಿ. ಆದರೆ, ಅದಕ್ಕೆ ಕಿವಿಗೊಡುವವರಾರು ?

ಮಹಮದ್ ಬ್ಯಾರಿಯ ತಂಗಿಯ ಮಗ ಶಬೀರ್ ದುಬಾಯಿಗೆ ಹೋಗಲು ಹೊರಟಿದ್ದ. ಅಲ್ಲಿ ಕೈತುಂಬಾ ಸಂಪಾದನೆ ಇದೆ. ಅವನಿಗೂ

ಶಬಾನಾಳನ್ನು ಕಂಡರೆ ಪ್ರೀತಿ. ಅವಳಿಗೂ ಅವನು ಪ್ರೀತಿಯ ಸಂಗಡಿಗನೇ. ಎಲ್ಲರಿಗೂ ಇದೊಂದು ಸುಸಮಯ. ಅವಸರದಲ್ಲಿಯೇ ಅವನಿಗೆ ಶಬಾನ ಳನ್ನು ಕೊಟ್ಟು ಮದುವೆ ಮಾಡಿದರು.

ಆದರೆ.....!

ಅವನು ವಿವಾಹಾನಂತರ ಇದ್ದುದು ಕೇವಲ ಹತ್ತು ದಿನಗಳು ಮಾತ್ರ. ಅವನ ಅಕ್ಕತಂಗಿಯರ ಮನೆ ಮತ್ತು ಅಲ್ಲಿ–ಇಲ್ಲಿ ಓಡಾಡುವುದರಲ್ಲಿ ಆ ಹತ್ತು ದಿನ ಹತ್ತು ಗಳಿಗೆಯಂತೆ ಜಾರಿ ಹೋಯಿತು ! ಎಲ್ಲಿಡೆಯೂ ಓಡಾಡಿದ್ದು ಬುರುಕಾದಲ್ಲಿಯೇ. ಶಬೀರ್ ತಮ್ಮವರಿಗೆ ತಿಳಿಯದಂತೆ ಅವಳನ್ನು ಸಿನಿ ಮಾಕ್ಕೆ ಕರೆದೊಯ್ಯುವ ಉಪಕಾರ ಮಾಡಿದ. ಆ ಸಿನಿಮಾ ಜಗತ್ತನ್ನು ನೋಡಿದರೆ ಎಂತಹ ಆನಂದವೋ....ಅದರ ಕಥೆ ಹೇಗಾದರೂ ಇರಲಿ. ಅಂತೂ ಆ ದೃಶ್ಯಮಾನ ವೈಭವ ಹೃದಯವನ್ನು ಸೂರೆಗೊಂಡಿತು. ಅವನ ಎದೆಯಲ್ಲಿ ಹುದುಗಿ ಬೆರಳಿಗೆ ಬೆರಳುಗಳನ್ನು ಬೆರಸಿ ಚಿನ್ನಾಟವಾಡುತ್ತ "ನೀನೆಷ್ಟು ಒಳ್ಳೆಯವನು ಶಬೀರ್ !! ನೀನು ಹೋಗುವಾಗ ನನ್ನನ್ನೂ ಕರೆದುಕೊಂಡು ಹೋಗು. ನನಗಿಲ್ಲಿಯ ಜೀವನ ಏನೇನೂ ಇಷ್ಟವಿಲ್ಲ. ನೀನೇ ನನ್ನ ಪ್ರಾಣಪದಕ. ನೀನು ಹೇಳಿದಂತೆ ಕೇಳುವೆ ! ನನ್ನನ್ನು ಇಲ್ಲಿ ಬಿಟ್ಟು ಹೋಗಬೇಡ.....ದಯಮಾಡಿ ನನ್ನನ್ನು ಕರೆದುಕೊಂಡು ಹೋಗು" ಎಂದು ಗೋಗರೆದಳು ಶಬಾನಾ, ಹೃದಯ ತಂತುಗಳಲ್ಲಿ ಕಂಬನಿ ಸಂಜನಿಸುವಂತೆ.

"ಇದೆಲ್ಲಾದರೂ ಸಾಧ್ಯವೇ? ನಿನ್ನ ಅಪ್ಪ ಕಳುಹಿಸುವುದುಂಟೇ? ಸಧ್ಯ, ಆಗದಹೋಗದ ಪ್ರಶ್ನೆ. ಈ ಸುದ್ದಿಯನ್ನು ನನ್ನ ಮುಂದೆ ಹೊರತೂ ಬೇರಾರ ಮುಂದೆ ಎತ್ತಬೇಡ. ದುಬಾಯಿ ಯಾವ ಮಹಾದೂರ? ಬಂದು ಹೋಗುತ್ತಿರುವೆ. ಮೂರು-ನಾಲ್ಕು ವರ್ಷ ಅಲ್ಲಿ ಕೆಲಸ ಮಾಡಿದರೆ ಕೈತುಂಬ ಹಣ ಸಂಪಾದಿಸಬಹುದು. ಅನಂತರ ಇಲ್ಲಿಯೇ ನನ್ನ ಉದ್ಯೋಗ ಹುಟ್ಟುಹಾಕುವೆ. ಅಲ್ಲಿಯವರೆಗೆ ಕಷ್ಟ. ಅನಂತರ ನೀನು ನನ್ನ ರಾಣಿ !"

ಅವಳು ತನ್ನಳಲಿನಲ್ಲಿಯೂ ಕಿಲಕಿಲ ನಕ್ಕು 'ನೀನು ನನ್ನ ರಾಜ' ಎಂದಳು, ಸಂತಸವನ್ನು ಸೂಸಿ.

"ನೀನು ಹೋಗುವುದರೊಳಗೆ ನನ್ನನ್ನು ಎಲ್ಲಿಗಾದರೂ ಕರೆದು ಕೊಂಡು ಹೋಗು. ಬೃಂದಾವನ ಹತ್ತಿರ. ಅಲ್ಲಿಗೆ ಹೋಗಿ ಬರೋಣವೇ ? ನೀನೇನು ಹೇಳುತ್ತಿ ?"

"ಆಗಬಹುದು."

ಅವನೊಂದಿಗೆ ಬೃಂದಾವನಕ್ಕೆ ಹೋಗಿ ಬಂದಳು ಶಬಾನಾ. ಹೋಗು ವಾಗ ಬುರುಕಾ. ಬೃಂದಾವನ ಮುಟ್ಟಿದ ನಂತರ ಬುರುಕಾ ತೆಗೆದು ಚೀಲಕ್ಕೆ ತುರುಕಿದುದನ್ನು ನೋಡಿ ಶಬೀರ್ ಕಿಲಕಿಲ ನಕ್ಕು "ಪರವಾಯಿಲ್ಲ ನೀನು, ಬಿಟ್ಟರೆ ಬಿಚ್ಚಿದ ಕುದುರೆಯೇಸ್ಸೆ!" ಎಂದ.

"ನಿನಗೆ ನನ್ನ ಕಷ್ಟ ಹೇಗೆ ಗೊತ್ತಾಗುತ್ತೆ ಹೇಳು? ನೀವು ಗಂಡಸ ರೆಲ್ಲಾ ಕೆಲವು ದಿನ ಬುರುಕಾ ಹಾಕಿ ನೋಡಿದರೆ ತಿಳಿಯುತ್ತೆ. ಕೆಲವು ದಿನ ನೀನು ಹಾಕಿ ನೋಡು!"

"ಸರಿ....ಸರಿ!"

"ಮಹಮದ್ ಪೈಗಂಬರರು ಹುಟ್ಟಿದ್ದು ಯಾವ ಕಾಲದಲ್ಲಿ? ನಮ್ಮ ಧರ್ಮ ಬೆಳೆದುದ್ದು ಯಾವ ಕಾಲದಲ್ಲಿ? ಈಗಲೂ ಅದನ್ನೇ ನಡೆಸಿಕೊಳ್ಳಿ ಎನ್ನುವುದು ಮೂರ್ಖತನವಲ್ಲವೇ?"

"ಈ ಪ್ರಶ್ನೆಯನ್ನು ಮಾವನ ಮುಂದೆ ಇಡು!"

"ಗುಂಡಿಟ್ಟಾರು!"

* * * *

ಶಬೀರ್ ದುಬಾಯಿಗೆ ಹೋಗಿ ಆರು ತಿಂಗಳು ಉರುಳಿ ಹೋದುವು.

ಹಸಿರು ಲಕ್ಕೋಟೆ ಆಗಾಗ ಅವನ ಸುದ್ದಿ ತರುತಿತ್ತು. ಆ ಕಾಗದ ಬಂದಾಗ ದುಬಾಯಿಯಿಂದ ಬಿರುಗಾಳಿ ಬಂದಷ್ಟು ಅದರಲ್ಲಿ ಬಿಸಿ ಬಿಸಿ ಸುದ್ದಿ. ತಾನು ಏನೆಲ್ಲಾ ಮಾಡಿದೆ.....ಏನೆಲ್ಲಾ ನೋಡಿದೆ.....ಏನೆಲ್ಲಾ ಕೊಂಡು ಕೊಂಡೆ. ತನ್ನ ಸಂಪಾದನೆ ಎಷ್ಟು. ಇವೇ ಸುದ್ದಿ. ಕಾಗದದ ತುಂಬೆಲ್ಲಾ ಬರವಣಿಗೆ. ಅಂಚಿನಲ್ಲೂ ಕಿಂಚಿತ್ ಸ್ಥಳವಿರುತ್ತಿರಲಿಲ್ಲ. ಆದರೆ, ಅವನು ಪದೇ ಪದೇ ಬರೆಯುವುದಿಲ್ಲ ಎಂಬುದೊಂದು ಕೊರತೆ.

ಶಬಾನಾ ತಾಯಿಗೆ ಹೆಣ್ಣು ಮಗು ಆಗಲಿ ಎಂದು ಬಯಸಿದಷ್ಟೇ ಆಸೆ ಯನ್ನು ಲಾಲನೆಯಲ್ಲಿ ತೋರಲಾರದಷ್ಟು ಕಿನಿಸಿಗೆ. ಶಬಾನಾ ಸದಾ ಮನೆ ಗೆಲಸ ಅಥವಾ ಯಾವುದಾದರೊಂದು ಪುಸ್ತಕ ಇವುಗಳಲ್ಲೇ ಮುಳುಗಿರು ತ್ತಾಳೆ. ಮಗು ಅಳುತಿದ್ದರೂ ಕಿವಿಕೊಡಲಾರದಷ್ಟು ಕಿವುಡಿಯೆನ್ನಬಹು ದೇನೋ..... ಅಂತೂ, ನಿರ್ಲಕ್ಷ್ಯ.

ಮನಸ್ಸಿನಲ್ಲಿ ಏನೋ ಒಂದು ಬಗೆಯ ಮುಜುಗರ. ಇನ್ನೇನೋ ಒಂದು ಬಗೆಯ ಕಿನಿಸಿಗೆ. ಮತ್ತೇನೋ ಒಂದು ಬಗೆಯ ಜಿಗುಪ್ಸೆ. ಹೀಗೆ ಏನೇನೋ ಮನಸ್ಸು ಮುತ್ತಿ ಘಾಸಿಗೊಳಿಸುತ್ತವೆ. ಒಮ್ಮೊಮ್ಮೆ ಎಲ್ಲೋ ಮೂಲೆಯಲ್ಲಿ ಕುಳಿತು ಕಂಬನಿಗರೆಯುತ್ತಲೋ ಶಬೀರನ ವಿಚಾರವನ್ನು ಚಿಂತಿಸುತ್ತಲೋ ಕುಳಿತಿರುವುದೂ ಉಂಟು. ಹುಡುಗರ ಒರಟುತನ, ತಂದೆಯ ಅಬ್ಬರ, ಮಕ್ಕಳ ಕಿರಿಕಿರಿ, ತಾಯಿಯ ಸಂಪ್ರದಾಯ ಒಂದೊಂದೂ ಸುತ್ತಮುತ್ತ ವರ್ತುಲವನ್ನು ನಿರ್ಮಿಸುತಿದ್ದರೆ ನಿವಾರಣೋಪಾಯವೇ ಇಲ್ಲ ; ಜೀವನ ನೀರಸ.

ಫಾತೀಮಾ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ನಮಾಜು ಮಾಡುತ್ತಿರುವಾಗಲೇ ಮಗು ಎದ್ದು ಅಳಹತ್ತಿತು. ಶಬಾನಾ ಒಳಗಿದ್ದಾಳೆ, ಎತ್ತಿಕೊಳ್ಳಬಹುದು ಎಂದುಕೊಂಡರೆ ಅವಳ ಸುದ್ದಿಯೇ ಇಲ್ಲ. ಫಾತೀಮಾ ಆಶ್ಚರ್ಯದಿಂದ ಒಳಬಂದು ನೋಡಿದರೆ ಕಿಟಕಿ ಬಾಗಿಲನ್ನು ತೆರೆದುಕೊಂಡು ಬೀದಿಯತ್ತ ದೃಷ್ಟಿ ಹರಿಸಿದ್ದಾಳೆ ಶಬಾನಾ!

"ಏನಿದು ಶಬಾನಾ ? ಮದುವೆಯಾದ ಹೆಣ್ಣು ! ಬೀದಿಯಮೇಲೆ ಕಣ್ಣಿಟ್ಟರೆ ಯಾರಾದರೂ ಏನೆಂದಾರು ? ನಿನ್ನ ಅತ್ತೆಗೆ ತಿಳಿದರೆ ಏನು ಗತಿ? ಈ ಸಣ್ಣ ಸಣ್ಣ ಮಕ್ಕಳ ಅವಾಂತರಕ್ಕೆ ನಿನ್ನನ್ನು ಇಲ್ಲಿ ಉಳಿಸಿದ್ದಾಳೆ. ಮುಂದೆ ಅದಕ್ಕೂ ಕಲ್ಲು ಬೀಳುತ್ತೆ! ಮಗು ಆಗಿನಿಂದ ಅಳುತ್ತಿದೆ. ಅದರ ಕಡೆಯೂ ನಿನ್ನ ಗಮನವಿಲ್ಲಾ ?"

ಆ ಮಾತಿಗೆ ಶಬಾನಾ ಸಿಡುಕುತ್ತ "ನನಗೆ ಸಾಕಾಗಿದೆ !" ಎಂದು ಒಳಹೋಗಿ ಮೂಲೆಯಲ್ಲಿ ಕುಳಿತಳು. ಮನದಲ್ಲಿ ಶಬೀರ್ ಮೂಡಿನಿಂತ. ಅವನಿಂದ ಈಚೆಗೆ ಪತ್ರವೇ ಇಲ್ಲ. ಚಿಂತಿಸಿ ಅವನಿಗೊಂದು ದೀರ್ಘ ಪತ್ರ ಬರೆದು ....ನನಗೆ ಏನೇನೋ ಆಗ್ತಿದೆ. ನೀನೊಮ್ಮೆ ಬಂದು ನೋಡು, ಎಂದು ಮುಗಿಸಿದ್ದಳು. ಅಪ್ಪ, ಅಣ್ಣತಮ್ಮಂದಿರು ಯಾರೂ ಇಲ್ಲದಾಗ ಬುರುಕ ಹಾಕಿಕೊಂಡು ಹೋಗಿ ಅಂಚೆ ಪೆಟ್ಟಿಗೆಗೆ ಹಾಕಿ ಬಂದಳು.

ಈಚೀಚೆಗೆ ಒಮ್ಮೆ ನಗುತ್ತ ಕೆಲಸ ಮಾಡುತಿದ್ದರೆ ಇನ್ನೊಮ್ಮೆ ಸಿಡುಕು.....ಮತ್ತೊಮ್ಮೆ ದುಃಖ.

"ನಿನಗೇನಾಗಿದೆ. ಶಬಾನಾ? ಏಕೆ ಹೀಗಿದ್ದಿ?"

ಫಾತೀಮಾಳ ಪ್ರಶ್ನೆಗೆ ಶಬಾನಾ ನಿರುತ್ತರೆ.

* * * *

ಮಹಮದ್ ಬ್ಯಾರಿಯದು ಕಬ್ಬಿಣದ ವ್ಯಾಪಾರ ವ್ಯಾಪಾರ ಘನವಾಗಿದ್ದರೂ ಮನೆಯಲ್ಲಿ ಹನ್ನೊಂದು ಮಕ್ಕಳ ಸಂಸಾರ. ಒಂಭತ್ತು ಮಂದಿ ಹುಡುಗರು. ವಿದ್ಯಾಭ್ಯಾಸ-ಬಟ್ಟೆ ಬರೆ ಇವುಗಳ ಹೊಂದಾಣಿಕೆಯಲ್ಲೇ ಹಣದಹೊಳೆ ಹರಿದು ಹೋಗುತ್ತಿದ್ದರೆ ಮಹಮದ್ ಬ್ಯಾರಿಯ ಮನಸ್ಸು ಸಿಡಿಮಿಡಿಗೊಳ್ಳುತಿತ್ತು. ವಿನಾಕಾರಣ ಅಬ್ಬರಿಸಿ ಎಲ್ಲರ ಮೇಲೂ ರೇಗಾಡುತಿದ್ದ. ತಂದೆಯ ದನಿ ಕೇಳಿದಾಗಲೇ ಶಬಾನಾ ಎಲ್ಲೋ ಅಡಗಿಕೊಳ್ಳುವುದು ರೂಢಿ. ಎಷ್ಟೋ ದಿನ ಅವಳ ಮುಖವನ್ನೇ ನೋಡದಿರುವುದೂ ಉಂಟು.

ಇಂದು ಶಬಾನಾಳ ಅತ್ತೆ ಬಂದಿದ್ದಾಳೆ. ಶಬಾನಾಳನ್ನು ಚಿಕ್ಕಂದಿನಿಂದ ನೋಡಿದ ಹೆಣ್ಣಾದುದರಿಂದ ಹೊಸದಾಗಿ ಹೇಳಿಕೇಳುವ ವಿಶೇಷವೇನೂ ಇರಲಿಲ್ಲ. ಬರಬರುತ್ತಲೇ ಅವಳೆಂದಳು "ಶಬೀರ್ ಮುಂದಿನ ತಿಂಗಳು ಊರಿಗೆ ಬರುವುದಾಗಿ ಬರೆದಿದ್ದಾನೆ. ಅಲ್ಲಿಯವರೆಗೆ ಶಬಾನಾ ನಮ್ಮಲ್ಲೇ ಇರಲಿ."

ಫಾತೀಮಾ ಅದಕ್ಕೆ ಒಲ್ಲೆ ಎನ್ನಲಿಲ್ಲ. ಮದುವೆಯಾಗಿ ಆಗಲೇ ವರುಷವಾಗುತ್ತಾ ಬಂತು. ಅತ್ತೆಯ ಮನೆಯಲ್ಲಿ ಒಂದೆರಡು ತಿಂಗಳೂ ಇರಲಿಲ್ಲ. ಅಂದಮೇಲೆ, ಕಳುಹಿಸಬೇಕಾದುದೂ ನ್ಯಾಯವೇ. ತನಗಿರುವ ಸಣ್ಣ ಪುಟ್ಟ ಮಕ್ಕಳನ್ನು ಸುಧಾರಿಸುವುದೇ ಕಷ್ಟವೆಂದು ತನ್ನಲ್ಲೇ ಪರಿಭಾವಿಸಿ ಸುಮ್ಮನಾದರೂ ನೋಟ ಮಗಳ ಕಡೆ ಹರಿಯಿತು. ಶಬಾನಾ ಪತಿಯ ಆಗಮನ ವಾರ್ತೆಯಿಂದ ಸಂತುಷ್ಟಳಾಗಿ "ಆಗಲಿ, ಅಮ್ಮಾ ಹೋಗಿದ್ದು ಬರುವೆ. ಶಬೀರ್ ಬಂದ ನಂತರ ಒಟ್ಟಿಗೆ ಬಂದರಾಯಿತಲ್ಲ?" ಎಂದಳು.

ಬೀಗತಿಯ ಉಪಚಾರಕ್ಕೆಂದು ಏನೇನೋ ಔತಣದ ಏರ್ಪಾಡು.

ಎಲ್ಲದರಲ್ಲೂ ಶಬಾನಾ ಕೈ ಹಾಕಿದ್ದರೂ ಒಲ್ಲದ ಮನಸ್ಸಿಂದಲೋ ಏನೋ ಖಾದ್ಯಗಳ ರುಚಿ ಕೆಟ್ಟಿತು. ಬೀಗತಿ ಏನೆಂದಳೋ ಎಂದುಕೊಂಡು ಆ ತಪ್ಪುಗಳನ್ನು ತನ್ನ ಮೇಲೆಯೇ ಹಾಕಿಕೊಂಡಳು ಫಾತೀಮಾ. ಶಬಾನಾ ಅತ್ತೆಯೊಂದಿಗೆ ಹೋದಾಗ ಬುರುಕಾ ಹಾಕಿಕೊಂಡೇ ಹೋಗಿದ್ದಳು. ಒಳ

ಕೋಣೆಗೆ ಹೋದನಂತರ ಬುರುಕ ತೆಗೆದು ದಿನಚರಿಯಲ್ಲಿ ತೊಡಗಿದರೆ ಕಟ್ಟಾ ಸಂಪ್ರದಾಯವಾದಿ ಅತ್ತೆ ಇಳಿವಯಸ್ಸಿನಲ್ಲೂ ಬುರುಕ ತೆಗೆಯದೆ ತಾನು ನಡೆಸಿಕೊಂಡು ಬಂದ ಮುಸ್ಲಿಂ ಸಂಪ್ರದಾಯವನ್ನು ಬಣ್ಣಿಸಿ ಹೇಳಿ ದಳು. ಶಬಾನಾ ಎಲ್ಲವನ್ನೂ ಕೇಳಿಕೊಂಡು ಅಡಿಗೆ ಮನೆ-ಒಳಕೋಣೆ ಗಳಿಂದ ಹೊರಬಾರದೇ ದಿನದಿನಕ್ಕೂ ಶಬೀರನ ಸುಖಾಗಮನವನ್ನು ಬಯಸುತ್ತಾ ಕಾಲಹರಣ ಮಾಡಿದಳು.

ಎರಡು ಮೂರು ತಿಂಗಳು ಸರಾಗವಾಗಿ ಉರುಳಿ ಹೋದುವು.

ಶಬೀರನ ಆಗಮನವಾಗಲೀ ಕಾಗದವಾಗಲೀ ಇಲ್ಲವೇ ಇಲ್ಲ.

ಶಬಾನಾ ಹಗಲೆಲ್ಲಾ ಹೇಗೆ ಹೇಗೋ ಕಾಲಹರಣ ಮಾಡಿದರೂ ರಾತ್ರಿಯ ವಿರಹ ತಾಪಾಗ್ನಿಯಲ್ಲಿ ಬೇಯುತ್ತ ನಿದ್ದೆಗೇಡಿಸಿಂದ ಬಳಲಿ ಹೋದಳು. ದೇಹ ಪ್ರಕೃತಿ ದಿನೇ ದಿನೇ ಕ್ಷೀಣಿಸತೊಡಗಿತು. ದೈಹಿಕವಾಗಿ ಮಾತ್ರವಲ್ಲ, ಮಾನಸಿಕವಾಗಿಯೂ ಅಸ್ವಸ್ಥತೆ ಮೂಡಿತು. ಆದರೂ, ತೋರಗೊಡದಿರಲು ಸರ್ವ ಸಾಹಸ ಪ್ರಯತ್ನ ಮಾಡುತಿದ್ದಳು ಶಬಾನಾ. ಅವುದೋ ಕಂಡರಿಯದ ಅವ್ಯಕ್ತ ವೇದನೆ ಎದೆಯ ಕರಂಡವನ್ನು ಕೀಟದಂತೆ ಕೊರೆಯುವುದನ್ನು ಆ ಅಲ್ಲಾ ಮಾತ್ರ ಬಲ್ಲ.

* * * *

ಅನ್ಯಥಾ ಶರಣಂ ನಾಸ್ತಿ..........

ಶಬಾನಾಳ ಮಾವ ರಹೀಂ ಬ್ಯಾರಿ ಮೆಟ್ಟಲು ಹತ್ತಿದಾಗಲೇ ಪಾದ ರಕ್ಷೆಗಳ ವಿಶೇಷ ಸದ್ದು ಲರಕ್ ಲರಕ್ ಮನೆಯ ಒಳಾಂತರದ ಕಿವಿಗಳನ್ನು ಮಿಡಿಯಿತು. ಮಡದಿ ಲತೀಫ ದಡಕ್ಕನೆದ್ದು ನಿಂತಳೋ ಇಲ್ಲವೋ ಅಲ್ಲಿಂ ದಲೇ ರಹೀಂ ಬ್ಯಾರಿ ಉಚ್ಚಧ್ವನಿಯಲ್ಲಿ ಕೇಳಿದ,

“ಲತೀಫ! ನಿನಗಿಷ್ಟೂ ಜೀವನ ಪ್ರಜ್ಞೆಯೇ ಇಲ್ಲ. ನಾನೇನೋ ಹೊರ ಗಡೆಯ ವ್ಯವಹಾರದಲ್ಲಿ ಮುಳುಗಿ ಮೈಮರೆತರೆ ನಿನಗೇನು ಬಂದಿದೆ ಕೇಡು!”

“ಏನು? ನಿಮ್ಮ ಮಾತು ಅರ್ಥವಾಗುತ್ತಿಲ್ಲ?”

“ಸಲ್ಮಾಗೆ ಈಗ ಎಷ್ಟು ವಯಸ್ಸು?”

ಅವಳು ಒಂದು ಕ್ಷಣ ಯೋಚಿಸಿ ಬೆರಳೆಣಿಕೆಯಿಂದ ನುಡಿದಳು “ಮುಂದಿನ ಬಕ್ರೀದ್-ಗೆ ಹನ್ನೆರಡು ತುಂಬುತ್ತೆ.”

"ಅವಳು ಇತರ ಜಾತಿಯ ಹುಡುಗಿಯರೊಂದಿಗೆ ಕೂಡಿ ಮುಸ್ಲಿಂಮತ ಪದ್ಧತಿಯನ್ನೇ ಮರೆತು ಬಿಟ್ಟಿದಾಳೆ. ನಾನೂ, ಪೀರ್ ಮತ್ತು ಭಾಷರವರೊಂದಿಗೆ ನಡೆಯುತ್ತಿದ್ದರೆ, ಇವಳ ಕಾಡು ಹರಟೆ ನಗೆಯ ಗುಲ್ಲು ನಡೆದಿತ್ತು ಸ್ಕೂಲಿಂದ ಬರುವಾಗ ! ಪೀರೂ ಹೇಳಿದ ನಿನ್ನ ಮಗಳನ್ನು ಇನ್ನೂ ಏಕೆ ಶಾಲೆಗೆ ಕಳುಹಿಸುತ್ತಿದ್ದೀ ? ಈ ಹೆಂಗಸರೆಲ್ಲ ಕಲಿತು ಮಾಡುವುದೇನು ? ವಿದ್ಯೆ ಹೆಚ್ಚಾದರೆ ಮಾತು ಕೇಳುತ್ತಾರೆಯೇ ? ಮುಂದೆ ಹದ್ದುಬಸ್ತಿನಲ್ಲಿರುತ್ತಾರೆಯೇ? ಚಪ್ಪಲಿಗಳಿಗೆ ಎಷ್ಟು ಬೆಲೆ ಕೊಡಬೇಕೋ ಅಷ್ಟು ಕೊಡಬೇಕು ಈ ಹೆಣ್ಣು ಜನ್ಮಕ್ಕೆ ! ನಿನಗಿದೆಲ್ಲ ಅರ್ಥವಾಗುವುದೇ ಇಲ್ಲವಲ್ಲ ?" ಎಂದು.

"ಅವಳಿಗಿನ್ನೂ ಹನ್ನೆರಡು ತುಂಬಲಿಲ್ಲ. ಚೆನ್ನಾಗಿ ಬೆಳೆದಿದ್ದಾಳೆ ಅಷ್ಟೆ."

"ಇನ್ನವಳನ್ನು ಶಾಲೆಗೆ ಕಳುಹಿಸಬೇಡ ತಿಳಿಯಿತೇ ?"

"ವಿದ್ಯೆಗೇಕೆ ತಡೆ ? ಬುರುಕ ಹಾಕಿ ಕಳುಹಿಸೋಣ !"

"ಅದೆಲ್ಲಾ ಸಾಧ್ಯವೇ ಇಲ್ಲ !"

ಕಡ್ಡಿ ಮುರಿದಂತೆ ಮಾತು ಹೊರಬಿತ್ತು. ಅದಕ್ಕೊಂದು ಪೀಠಿಕೆಯಾಗಲಿ ಸರಳ ವ್ಯಾಖ್ಯಾನವಾಗಲೀ ಇಲ್ಲವೇ ಇಲ್ಲ. ಅಲ್ಲಿಗೆ ತಟಕ್ಕನೆ ಮುಗಿಯಿತು ಪ್ರಸ್ತಾಪ.

ಒಳಗಿನಿಂದ ಈ ಸಂಭಾಷಣೆಯನ್ನು ಕೇಳಿಸಿಕೊಂಡ ಶಬಾನಾಳ ಮೈಯಲ್ಲಿ ಸಣ್ಣ ಚಳಿ ಹರಿದಾಡಿ ಹೋಯಿತು.... ಸಲ್ಮಾ ಒಳ್ಳೆಯ ಸ್ವಭಾವದ ಚುರುಕು ಹುಡುಗಿ. ಅವಳ ವಿದ್ಯೆ ಇಷ್ಟಕ್ಕೆ ಮುಗಿಯಿತೇ ? ಎಂದುಕೊಳ್ಳುತ್ತಿರುವಾಗಲೇ ಸಲ್ಮಾ ಒಳಹೆಜ್ಜೆಯಿಟ್ಟಳು. ಕೈತುಂಬ ಪುಸ್ತಕ. ಮುಖದ ತುಂಬಾ ಬೆವರು. ಪುಸ್ತಕಗಳನ್ನು ಗೂಡಿನಲ್ಲಿಡುತಿದ್ದಂತೆಯೇ ಶಬಾನಾ ನುಡಿದಳು "ಸಲ್ಮಾ, ನಿನಗೆ ವಯಸ್ಸು ಹನ್ನೆರಡಾಯಿತು. ಇನ್ನು ಶಾಲೆಗೆ ಕಳುಹಿಸಬೇಡ ಎನ್ನುತಿದ್ದರು ಮಾವ. ನೀನು ಬುರುಕ ಹಾಕಿಕೊಂಡು ಹೋಗುವೆ ಎಂದು ಕೇಳಿಕೊ. ಇಲ್ಲದಿದ್ದರೆ ವಿದ್ಯೆ ಇಲ್ಲಿಗೇ ಮೊಟಕಾಗುತ್ತೆ!"

"ಬುರುಕ ಹಾಕಿಕೊಂಡು ಸ್ಕೂಲಿಗೆ ಹೋಗುವುದೇ ? ಅದೂ ಏಳನೇ ತರಗತಿಗೆ ? ಎಂತಹ ಅಸಹ್ಯ ? ಬೇರೆ ಹುಡುಗಿಯರೆಲ್ಲ ಎಷ್ಟು ಆರಾಮವಾಗಿ ಹೋಗಿ ಬರುತ್ತಾರೆ. ನಮಗಿದೊಂದು ಗೋಳು !"

"ಏನು ಮಾಡೋಣ ? ಹೆಣ್ಣಾಗಿ ಹುಟ್ಟುವುದು ತಪ್ಪು!"

"ನೀನು ಕಾಲೇಜು ಓದಿದ್ದಿ ! ನನಗೇಕೆ ನಿರ್ಬಂಧ ?"

"ನನ್ನ ಕತೆ ಏನು ಕೇಳುತ್ತಿ ? ಅಮ್ಮ ಯಾವಾಗಲೂ ಬಸಿರಿಯೋ ಬಾಣಂತಿಯೋ ಇರುತಿದ್ದುದರಿಂದ ಓದಲು ಸಮಯವಾದರೂ ಎಲ್ಲಿರುತ್ತಿತ್ತು? ಕಾಲೇಜಿನ ಮೊದಲನೆಯ ತರಗತಿಯಲ್ಲಿಯೇ ಅನುತ್ತೀರ್ಣಳಾದುದೇ ಸಾಕೆಂದು ಕಾಲೇಜು ಬಿಡಿಸಿದರು ಅಪ್ಪ."

"ನಾನು ಬುರುಕ ಹಾಕಿಕೊಂಡು ಶಾಲೆಗೆ ಹೋಗಲಾರೆ. ಶಾಲೆ ಬಿಡಿಸಿದರೆ ಪಕ್ಕದ ಮನೆ ಹುಡುಗಿಯೊಂದಿಗೆ ಕವಡೆ ಆಡ್ತೀನಿ ಅಷ್ಟೆ."

"ನಿನಗೆ ವಿದ್ಯೆ ಬೇಡವಾ ?"

"ವಿದ್ಯೆ ಕಲಿತರೂ ನಾವು ಏನೂ ಮಾಡಲಾರೆವು ಎಂದಮೇಲೆ ವಿದ್ಯೆಯಿಂದೇನು ಪ್ರಯೋಜನ ?"

ಶಬಾನಾ ಒಂದು ಗಳಿಗೆ ಯೋಚಿಸಿ ಮೌನಧಾರಣೆ ಮಾಡಿದಳು.

* * * *

ಅಂತೂ, ಕೊನೆಗೊಮ್ಮೆ ಶಬೀರ್ ಬಂದ. ಅಲ್ಲಿಂದ ಬಹಳಷ್ಟು ಬಹುಮಾನಗಳನ್ನು ತಂದಿದ್ದ. ತಾವೆಂದೂ ಕಾಣದಂತಹ ಸೀರೆಗಳು, ಬಗೆ ಬಗೆಯ ವಸ್ತುಗಳು, ಒಡವೆಗಳು ಇತ್ಯಾದಿ... ಇತ್ಯಾದಿ. ಅವನಿಗೆ ಬಹುಮಾನಗಳನ್ನು ಹಂಚುವುದಕ್ಕಿಂತ ತನ್ನ ಮಡದಿಯ ಸ್ಥಿತಿಗತಿ ತುಂಬಾ ಶೋಚನೀಯ ಎನಿಸಿತು.

"ನೀನೇನು ಎಲುಬು ಚರ್ಮ ಆಗಿದ್ದೀಯೆ ? ಏಕೆ ? ಏನಾದರೂ ಕಾಹಿಲೆ ಬಿದ್ದೆಯಾ ?"

"ಏನೂ ಇಲ್ಲ. ಕಾಹಿಲೆ ಎಂದರೆ ನೀನಿಲ್ಲದಿರುವುದೇ ಕಾಹಿಲೆ. ನೀನು ಹೋಗುವಾಗ ನನ್ನನ್ನೂ ಕರೆದುಕೊಂಡು ಹೋಗು. ನೀನಿಲ್ಲದೆ ಜೀವನ ನನಗೆ ನರಕ !"

ಆ ಮಾತಿಗೆ ಶಬೀರ್ ಏನೂ ಹೇಳದೆ ನಕ್ಕುಬಿಟ್ಟ.

ನೀನು ಬಂದುದು ಒಂದು ತಿಂಗಳ ರಜೆಯ ಮೇಲೆ. ಮತ್ತೆ ನೀನು ಹೋಗುವುದರೊಳಗಾಗಿ ನಾನು ಸಮುದ್ರ ನೋಡಬೇಕು. ಬೊಂಬಾಯಿ ಅಥವಾ ಮದರಾಸಿಗೆ ಕರೆದುಕೊಂಡು ಹೋಗು. ನೀನು ದುಬಾಯಿಗಂತೂ

ಕರೆದುಕೊಂಡು ಹೋಗುವವನಲ್ಲ. ನಾವು ಎಲ್ಲಾದರೂ ಸುತ್ತಾಡಿ ಬರೋಣ. ನಾಲ್ಕು ಗೋಡೆಯೊಳಗೇ ಇದ್ದು ನನಗಂತೂ ತುಂಬಾ ಬೇಸತ್ತು ಹೋಗಿದೆ. ನೀನು ಇಲ್ಲಿಲ್ಲೇ ಸುತ್ತಾಡಿ ಸಮಯ ಕಳೆದರೆ ನನಗೆ ಸಮುದ್ರ ದರ್ಶನವೂ ಇಲ್ಲ; ಏನೂ ಇಲ್ಲ."

ಶಬಾನಾ ಕಣ್ಣೀರಿಡುತ್ತಲೇ ಗೋಗರೆದು ಕೇಳಿಕೊಂಡಳು.

"ಈಗ ಮೊದಲು ನಿನ್ನ ಅಮ್ಮ ಅಪ್ಪನನ್ನು ನೋಡಿ ಬರೋಣ. ಅಲ್ಲೇ ನಿನ್ನನ್ನು ವೈದ್ಯರಿಗೂ ತೋರಿಸಬೇಕಾಗಿದೆ. ಅನಂತರ ನಿರ್ಧಾರ."

ಶಬೀರ್ ಹಾಗೆಂದ. ಅವನಿಗೆ ಅಕ್ಕತಂಗಿಯರನ್ನು ನೋಡುವ ಅಗತ್ಯವಿತ್ತು. ಮೇಲಾಗಿ, ತನ್ನ ಗೆಳೆಯವೃಂದ; ಹೀಗೆ ಅಡ್ಡಾಡಿ ಬರುವುದರಲ್ಲೇ ವಾರವೊಂದು ಉರುಳಿಹೋಯಿತು. ಅನಂತರ ತಾಯಿ ಮನೆ. ಮಹಮದ್ ಬ್ಯಾರಿಗೆ ಅಳಿಯ ಬಂದುದು ಎಲ್ಲಿಲ್ಲದ ಸಂತೋಷ. ಅವನು ದುಬಾಯಿಗೆ ಹೋಗಿಬಂದರೂ ಜೀವನದಲ್ಲಿ ಕಟ್ಟುನಿಟ್ಟು ಅಷ್ಟಾಗಿ ಪಾಲಿಸುತ್ತಿಲ್ಲ ಎಂಬ ಸಣ್ಣ ಆಕ್ರೋಶ ಉಂಟು. ಆದರೂ, ಅದನ್ನು ತೋರಗೊಡದೆ ಸ್ವಾಗತಿಸಿ ದುಬಾಯಿಯಲ್ಲಿನ ಮುಸ್ಲಿಮರ ಆಚಾರ-ವಿಚಾರಗಳನ್ನು ಕುರಿತು ಕೇಳಿಕೊಂಡು ನುಡಿದ "ಇಷ್ಟೆಲ್ಲಾ ತಿಳಿದುಕೊಂಡಿದ್ದರೂ ನೀನಂತೂ ಪಳಗಲಿಲ್ಲ. ಮತಪದ್ಧತಿಯನ್ನು ಗಾಳಿಗೆ ತೂರುತಿದ್ದೀಯೆ !"

"ಪಳಗದೆ ಏನು ? ನಾನೆಷ್ಟು ಪಾಲಿಸುತ್ತಿಲ್ಲ ?"

ಮುಹಮುದ್ ಬ್ಯಾರಿ ತಿರಸ್ಕಾರದ ನಗೆ ಬೀರಿದ.

* * * *

ವೈದ್ಯರ ಕೊಠಡಿಯಲ್ಲಿ ವೈದ್ಯರಿಗಾಗಿ ಕಾದಿದ್ದ ಶಬಾನಾ ಮತ್ತು ಶಬೀರ್ ಹೊಸ್ತಿಲಿನ ಬಳಿ ಬೂಟುಕಾಲಿನ ಸದ್ದನ್ನು ಕೇಳಿ ದೃಷ್ಟಿ ಅತ್ತ ಹೊರಳಿಸಿದರೆ ನಿಜಕ್ಕೂ ಬಂದವರು ಡಾಕ್ಟರೇ.

ಬಹಳ ಹೊತ್ತಿನಿಂದ ಕಾದಿದ್ದು ಬೂಟ್ಸಿನ ಸಪ್ಪಳ ಕೇಳಿದಾಗಲೆಲ್ಲಾ ಡಾಕ್ಟರೇ ಬಂದರೆಂದು ನೋಡಿ ನೋಡಿ ನಿರಾಸೆಗೊಂಡ ಕಣ್ಣುಗಳಿಗೆ ಡಾಕ್ಟರು ಕಂಡುಬಂದಾಗ 'ಸಧ್ಯ ಬಂದರಲ್ಲಾ' ಎನ್ನಿಸಿ ನಿರಾಳವಾಗಿ ಉಸಿರಾಡಿದರು.

"ನಮಸ್ಕಾರ, ಡಾಕ್ಟರ್ !"

"ನಮಸ್ಕಾರ! ಕುಳಿತುಕೊಳ್ಳಿ."

"ಇವಳು ನನ್ನ ಪತ್ನಿ. ಈಚೆಗೆ ದಿನೇ ದಿನೇ ಕ್ಷೀಣಿಸುತ್ತಿದ್ದಾಳೆ. ದಯವಿಟ್ಟು ನೋಡಿ ಉಪಕರಿಸಿರಿ."

"ನಿಮಗೆ ಏನೇನು ತೊಂದರೆ ?"

ಅವಳು ತನ್ನ ಜೀವನದ ಪ್ರತಿಯೊಂದು ಮಜಲುಗಳನ್ನೂ ವಿವರಿಸಿ ತನ್ನ ಮನೋವೇದನೆಯನ್ನು ತಿಳಿಸುತ್ತ "ನನಗೆ ಈ ಬಗೆಯ ಜೀವನ ತುಂಬಾ ಬೇಸತ್ತುಹೋಗಿದೆ" ಎಂದಳು ; ಕಣ್ಣುಗಳಲ್ಲಿ ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡಿತು.

"ನೀವೇಕೆ ದುಬಾಯಿಗೆ ಕರೆದುಕೊಂಡು ಹೋಗಬಾರದು ?"

"ಪರದೇಶದಲ್ಲಿ ನಮ್ಮ ಜೀವನವೇ ಇಕ್ಕಟ್ಟಿನ ಪ್ರಸಂಗವಾಗಿರುವಾಗ ಹೆಂಗಸರನ್ನೂ ಕರೆದುಕೊಂಡು ಹೋಗುವುದು ತುಂಬಾ ಕಷ್ಟ. ಇಷ್ಟಕ್ಕೂ ನಾನು ಅಲ್ಲಿ ಎರಡು ಮೂರು ವರ್ಷ ಮಾತ್ರ ಇದ್ದೇನು. ಒಂದುವೇಳೆ ಅಷ್ಟ ರೊಳಗೆ ಒಳ್ಳೆಯ ಕೆಲಸ ಸಿಕ್ಕಿ ನೆಲೆ–ಬೆಲೆಗಳು ಸ್ಥಿರೀಕರಿಸಿದರೆ ಇವಳನ್ನು ಕರೆದುಕೊಂಡು ಹೋಗಲು ಸಾಧ್ಯ. ಇಲ್ಲವಾದರೆ ಹಿಂದಿರುಗಿ ಬಂದು ಬಿಡುವೆ."

ಶಬಾನಾ ಮಾತಾಡಲಿಲ್ಲ.

ಡಾಕ್ಟರು ಹೇಳಿದ "ನೀನು ಚಿಂತೆ ಬಿಟ್ಟು ಗಾಳಿ ಬೆಳಕಿನಲ್ಲಿ ಓಡಾಡಿ ದರೆ ಆರೋಗ್ಯ ಕುದುರುತ್ತದೆ. ನೀನು ಸದಾ ಕೊರಗುತ್ತ ಮೂಲೆಯಲ್ಲಿ ಕುಳಿತರೆ ಆಗುವುದೇ ಹೀಗೆ."

"ನಮಗೆ ಗಾಳಿ ಎಲ್ಲಿ ಹೇಳಿ.....? ಹೊರ ಹೋದರೆ ಬುರುಕ. ಒಳ ಗಿದ್ದರೆ ಕತ್ತಲೆ"

"ಆರೋಗ್ಯಕ್ಕಾಗಿಯಾದರೂ ಹೊಸಗಾಳಿ ಸೇವನೆ ಮಾಡಬೇಕು. ಅದೆಲ್ಲಾ ನಿಮ್ಮ ಕೈಯಲ್ಲೇ ಉಂಟು. ಪ್ರಯತ್ನ ಮಾಡಿ ; ಎಷ್ಟು ಸಾಧ್ಯವೋ ಅಷ್ಟು ಪಡೆದುಕೊಳ್ಳಿ."

"ಆಗಲಿ, ನಮಸ್ಕಾರ ಡಾಕ್ಟರ್."

ಇಬ್ಬರೂ ಹೊರಟರು. ಶಬೀರ್ ಹಾದಿ ನಡೆಯುತ್ತ ಹೇಳಿದ "ನೀನು ಹಗಲೆಲ್ಲಾ ಬೇಸರ ಪಟ್ಟುಕೊಂಡರೆ ಹೇಗೆ ? ಹುಡುಗರ ಪುಸ್ತಕ ತೆಗೆದು

ಕೊಂಡು ಓದು. ಪತ್ರಿಕೆಗಳು ಮ್ಯಾಗಜೀನ್‌ಗಳು ನಿನ್ನ ಮನಃಬುದ್ಧಿಗಳಿಗೆ ಬಹಳಷ್ಟು ಸಹಾಯ ಮಾಡುತ್ತವೆ. ನಿನ್ನನ್ನು ನೀನು ಕಾಪಾಡಿಕೊಳ್ಳಬೇಕೇ ಹೊರತು ಇನ್ನಾರು ಕಾಪಾಡುತ್ತಾರೆ ?" ಕಾರುಣ್ಯಪೂರ್ಣ, ದನಿ ಕಳಕಳಿ ಯಿಂದ ಕೂಡಿತ್ತು.

"ನೀನು ಹೋಗಲೇ ಬೇಡ, ಇಲ್ಲಿಯೇ ಇರು. ನನ್ನ ಅವ್ಯಕ್ತ ವೇದನೆ ಯನ್ನು ನೀನಾದರೂ ಅರ್ಥ ಮಾಡಿಕೋ ಶಬೀರ್ ! ದಯಮಾಡಿ ಅರ್ಥ ಮಾಡಿಕೋ !!"

* * * *

ಅವನಿರುವವರೆಗೂ ಎಡೆಬಿಡದೆ ಅವನೊಂದಿಗೆ ಓಡಾಡಿದಳು ಮಡದಿ.

ತಾಯಿಗೆ ಮನೆಯಲ್ಲಿ ಸಣ್ಣ ಸಣ್ಣ ಮಕ್ಕಳು. ಇವಳಿಂದ ತುಂಬಾ ಸಹಾಯವನ್ನು ಬಯಸಿದ್ದಳು ಕೂಡ. ಆದರೆ, ಅವನು ಹೋದಲ್ಲೆಲ್ಲಾ ಹೋಗುತ್ತೇನೆಂದರೆ ತೀರಾ ಹಳೆಯ ಸಂಪ್ರದಾಯವಾದಿಯಾದ ಅವಳಿಗೆ ಅತೀವ ಕಿರಿಕಿರಿ....ಮಹಮದ್ ಬ್ಯಾರಿ ಅಳಿಯನನ್ನು ಕುರಿತು,

"ನೀನು ಮಡದಿಗೆ ತುಂಬಾ ಸಲಿಗೆ ಕೊಟ್ಟದ್ದಿ. ಸಿನಿಮಾ-ಹೋಟೆಲು ಗಳ ರುಚಿ ತೋರಿಸಿದ್ದಿ. ಮುಂದೆ ಅವಳು ನಿನ್ನ ಮಾತು ಕೇಳುತ್ತಾಳೆಯೇ? ಬೂಟ್ಸು ಹಾಕಿಕೊಳ್ಳುವಾಗ ಹಾಕಿಕೊಳ್ಳಬೇಕು. ಬೇಡವಾದಾಗ ಮೂಲೆ ಯಲ್ಲಿ ಇಡವುದು ತಾನೇ ? ನಾಯಿಗೆ ಸಲಿಗೆ ಕೊಟ್ಟರೆ ನಾಲಿಗೆ ಚಾಚಿ ನೆಕ್ಕುತ್ತೆ. ಹಾಗೆಯೇ ಇದು. ನೀನು ನಾಲ್ಕಕ್ಷರ ಕಲಿತೆ ಎಂದು ಹೀಗಾಡಿ ದರೆ ಮುಂದೆ ಹೊಂಡಹಾರಬೇಕು.....!" ಇತ್ಯಾದಿ ಇತ್ಯಾದಿ ಉಪದೇಶದ ಸುರಿಮಳೆ ಹರಿದಾಗ ಅವನು ಸುಮ್ಮನೆ ಪಿಳಿಪಿಳಿ ನೋಡುತಿದ್ದ. ಮನಸ್ಸಿ ನೊಂದು ನೀರಾಗಿತ್ತು. ಆದರೂ, ಬಾಯ್ದೆರೆಯುವ ಧೈರ್ಯ ಮೂಡಲಿಲ್ಲ.

ದುಬಾಯಿಗೆ ಹೊರಡುವ ದಿನ ಬಳಿ ಸಾರಿ ಬಂತು.

"ಇನ್ನು ಮೇಲೆ ಆರು ತಿಂಗಳಿಗೊಮ್ಮೆ ಬಂದು ಹೋಗುವೆ. ಇನ್ನು ಅಲ್ಲಿರುವುದು ಎರಡು ವರ್ಷ ಮಾತ್ರ. ನೀನು ಓದಿದ ವಿಷಯ ಕುರಿತು ನನಗೆ ದೀರ್ಘವಾಗಿ ಬರೆಯುತ್ತಿರು."

ಎಂದು ಮಡದಿಯನ್ನು ಸಂತೈಸಿದರೆ ಅವಳ ಕಣ್ಣುಗಳಲ್ಲಿ ಸೂಸಿದ ಕಂಬನಿಯೇ ಉತ್ತರವಾಯ್ತು. ಪ್ರಯತ್ನಿಸಿದರೂ ತುಟಿಗಳು ಬಿರಿಯಲಿಲ್ಲ.

ಶಬೀರ್ ಎಲ್ಲರಿಗೂ ಟಾಟಾ ಹೇಳಿ ಹೊರಟ. ಶಬಾನಾ ಉಳಿದು ತಾಯಿಯ ಮನೆಯಲ್ಲಿಯೇ, ಸಮುದ್ರ ನೋಡುವ ಆಸೆ ಮುರು ಹೋಯಿತು.

ಅವಳು ತಮ್ಮಂದಿರೊಂದಿಗೆ ಅನ್ಯೋನ್ಯವಾಗಿರುವ ಮಾತಿರಲಿ ಸಿಡುಕು-ಸಿಟ್ಟು-ರೋಷಗಳ ಗಣಿಯಾದಳು. ದುಃಖ-ದುಗುಡಗಳು ತ ದೋರಿದುವು. ಕೆಲವೊಮ್ಮೆ ಪ್ರಸನ್ನತೆಯಿಂದ ಓಡಾಡಿ ಕೆಲಸ ಮಾಡುವುದೂ ಉಂಟು. ಮತ್ತೊಮ್ಮೆ ತನ್ನಲ್ಲೇ ಏನೇನೋ ಮಾತಾಡುತ್ತ ಅಳುವುದೂ ಉಂಟು.

ಒಬ್ಬಳೇ ತಂಗಿಯಾದ ಕೊನೆಯ ಮಗುವಿನಲ್ಲೂ ಪ್ರೇಮ ಅಷ್ಟಕ್ಕಷ್ಟೆ. ಒಮ್ಮೆ ಎತ್ತಿ ಮುದ್ದಾಡಿದರೆ ಇನ್ನೊಮ್ಮೆ ನಿರ್ಲಕ್ಷ್ಯ. ತಮ್ಮಂದಿರ ಒ ಟಾಟ. ಅಣ್ಣಂದಿರ ಕೂಗಾಟ, ತಂದೆಯ ಅಬ್ಬರ ಎಲ್ಲದರಲ್ಲೂ ಅಲಕ್ಷ್ಯ. ಪ್ರಕಾರದ ಬಾಗಿಲಿಗೋ ಬೀದಿಗೋ ಬುರುಕ ಇಲ್ಲದೆ ಹೋಗಿ ನಿಂತುಕೊಂಡು ಹಾದಿಗರ ಮೇಲೆ ಕಣ್ಣಿಡುವಳು ; 'ಅಲ್ಲಾ' ಕಣ್ಣು ಕೊಟ್ಟಿರುವುದು ನೋಡುವುದಕ್ಕಲ್ಲವೇ ? ಎಂಬ ಪ್ರಶ್ನೆ ಮನಃಕಲ್ಪದಲ್ಲಿ.

"ಅಯ್ಯೋ, ಇದೇನಿದು ? ಜನ ಏನೆಂದಾರು ? ಮುಸ್ಲಿಂ ಹುಡುಗಿ ಹೀಗೆ ಹೊರಹೋಗಿ ನಿಲ್ಲಬಹುದೇ ? ಶಬೀರ್‌ಗೆ ಗೊತ್ತಾದರೆ ನಿನಗೆ ತಲ್ಲಾಕ್ ಕೊಟ್ಟಾನು !"

ಹಾಗೆಂದು ತಾಯಿ ಒಳಗಿನಿಂದ ಕೂಗಿದಾಗ ಒಮ್ಮೆ ಸಿಡುಕಿ ಒಳ ಬಂದರೆ ಪುನಃ ಹೋಗಿ ನಿಲ್ಲುವುದು ಅಲ್ಲೇ ! ದೃಷ್ಟಿಗೆ ಅದೇ ನೋಟ ; ಅದೇ ರಸ್ತೆ ; ಅದೇ ಜನ.

"ಮದುವೆಯಾದವಳು ಬುರುಕ ಇಲ್ಲದೆ ಹೋಗಬಹುದೇ ?" ಎಂದು ಹೊಡಕೊಂಡರೂ ನಿರ್ಲಕ್ಷ್ಯ.

ಇಂದು ಬೆಳಿಗ್ಗೆ ಎದ್ದಾಗಲೇ ತನ್ನೊಳಗೇ ಬಡಬಡಿಸುತ್ತ ತನ್ನ ತಲೆ ಯನ್ನು ತಾನೇ ಕಿತ್ತುಕೊಳ್ಳತೊಡಗಿದಾಗ ಹುಡುಗರು ಸುತ್ತುಮುತ್ತ ಕೋಟೆಗಟ್ಟಿ ನಿಂತರು.

ಶಬಾನಾ ಸಿಟ್ಟಿಗೆದ್ದು ಹುಡುಗರಿಗೆ ಗುದ್ದಿ ಹೊರಬಿದ್ದಳು. ಮನಸ್ಸು ಕೆರಳಿ ಹುಚ್ಚಾಗಿತ್ತು. ಫಾತೀಮಾ ಓಡಿ ಬಂದು "ಇದೇನೇ ಶಬಾನಾ ? ಎಕೆ ಹೀಗಾಡುತ್ತಿ ?" ಎಂದು ಕೈಹಿಡಿದು ಕೇಳಿಕೊಂಡಳು.

ಆದರೆ.....!

ಶಬಾನಾ ಯಾರ ಮಾತನ್ನಾದರೂ ಕೇಳಿಕೊಳ್ಳುವ ಸ್ಥಿತಿಯಲ್ಲಿದ್ದಾಳೆಯೇ! ಕೆಂಪು ತಳೆದ ಕಣ್ಣುಗಳು. ಬಾಡಿ ಬತ್ತಿದ ಮುಖ ಬಿಂಬ. ಕೆರಳಿ ಹುಚ್ಚಾದ ಭಾವನೆಗಳು. ಹುಚ್ಚೆದ್ದು ಪ್ರವಹಿಸುವ ನೆತ್ತರು, ನಿಮಿರಿದ ನವಿರು. ಸಿಟ್ಟು–ರೋಷ–ದ್ವೇಷಗಳ ಒಕ್ಕೂಟವಾದ ಚಿತ್ರಕಲ್ಪ.....

ತಾಯಿಯ ಕೈಕೊಡವಿ ಹೊರಗಡೆ ಧಾವಿಸಿದಳು.

ಅಕ್ಕನ ಮನಃಸ್ಥಿತಿಯರಿತ ಹುಡುಗರು ಬೆಂಬಿಡಿದು ಹೋದರೆ ಅವಳು ಎಲ್ಲರಿಗೂ ಛೀಮಾರಿ ಹಾಕಿದಳು. ಆದರೂ, ಹುಡುಗರು ಮಣಿಯರು. ಒಬ್ಬನನ್ನು ತಳ್ಳಿ, ಇನ್ನೊಬ್ಬನಿಗೆ ಕಚ್ಚಿ ರಸ್ತೆಗೆ ದಾಟಿದರೆ ಮಿಂಚುಗಣ್ಣುಗಳಲ್ಲಿ ಇನ್ನಷ್ಟು ರಕ್ತ ಗೆಂಪು! ತೆಕ್ಕನೆ ಕೆರಳಿದ ಭಾವೋದ್ರೇಕ!

"ಅಕ್ಕ ಹುಚ್ಚಾಗಿದ್ದಾಳೆ! ಅಮ್ಮಾ! ಅಕ್ಕ ಹುಚ್ಚಾಗಿದ್ದಾಳೆ!" ಚಿಕ್ಕವನೊಬ್ಬ ಕೂಗಿದ.

"ನಾನು ಹೋಗುವೆ! ಈ ಬುರುಕ-ಬಂಧನ ನನಗೆ ಬೇಡವೇ ಬೇಡ! ನಾನು ಹೊರ ಹೋಗುವೆ! ಬುರುಕ ಅಂತೆ! ಬುರುಕ! ಏತಕ್ಕೋ ಈ ಬುರುಕ? ಯಾರ ಹಂಗೂ ನನಗೆ ಬೇಡ. ಬೇಡವೇ ಬೇಡ! ಹುಚ್ಚಂತೆ ಹುಚ್ಚು! ಯಾರಿಗೆ ಹುಚ್ಚು! ನಿನಗೇ ಹುಚ್ಚು! ಹಿಹ್ಹಿಹ್ಹೀೀೀ!"

ಶಬಾನಾ ಓಡುತ್ತಲೇ ಇದ್ದಾಳೆ! ಆ ಕ್ಷೀಣಿತ ದೇಹದಲ್ಲಿ ಎಂತಹ ಭೀಮ ಶಕ್ತಿಯಿದೆ? ಎಂದು ಎಂತಹ ಮುಗ್ಧರೂ ಅಚ್ಚರಿ ಪಡುವಂತಹ ಸನ್ನಿವೇಶ! ದಿಡು ದಿಡು ಪದಘಾತ....

ಒಮ್ಮೆ ನಗು, ಒಮ್ಮೆ ಅಳು. ಒಮ್ಮೆ ಕಿರುಚಾಟ.

ಬುರುಕ! ಬುರುಕ! ಹೆಹ್ಹೆಹ್ಹೇ! ಜಾತಿ-ಮತ-ಪಂಥ! ಹೆಹ್ಹೆಹ್ಹೇಕೇಕೆ ಹಾಕಿ ನಕ್ಕಳು ಶಬಾನಾ, ಸುತ್ತಮುತ್ತಿನ ಪರಿಸರಕ್ಕೆಲ್ಲಾ ಕೇಳಿಸುವಂತೆ.

"ಶಬಾನಾ! ಹೀಗೆಲ್ಲಾ ಆಡಬಾರದು ತಿಳಿಯಿತೇ? ಹೆಣ್ಣು ಮಕ್ಕಳು ಮರ್ಯಾದೆಯಿಂದ ಬಾಳಬೇಕು! ನನ್ನ ಮಾತು ಕೇಳು. ಒಳಗೆ ಬಾ."

ಮಹಮದ್ ಬ್ಯಾರಿ ಮಗಳನ್ನು ಎಳೆದೊಯ್ಯುತ್ತ ಹೇಳಿದ. ಅವಳು ಕಿತ್ತಾಡಿ–ಕೊಸರಾಡಿ ಕೈ ಬಿಡಿಸಿಕೊಳ್ಳುತಿದ್ದಂತೆ ಮಹಮದ್ ಬ್ಯಾರಿ ಮತ್ತೆ

ನುಡಿದ "ಇಂದು ಶಬೀರ್ ಬರುತ್ತಾನೆ ! ನೀನು ಹೀಗಿದ್ದರೆ ಏನೆಂದಾನು?

"ಶಬೀರ್ ! ಶಬೀರ್ ಸತ್ತು ಹೋಗಿದ್ದಾನೆ ! ಇನ್ನೆಲ್ಲಿಯ ಶಬೀರ್ ಹೆಹ್ಹೆಹ್ಹೇ ! ಶಬೀರ್ ಸತ್ತ ! ಸತ್ತ-ಸತ್ತ ! ಹೆಹ್ಹೆಹ್ಹೇ !! ಸಮುದ್ರದಲ್ಲಿ ಮುಳುಗಿ ಸತ್ತ !! ಹೆಹ್ಹೆಹ್ಹೇ!!

"ಮಗಳೇ ! ನನ್ನ ಮರ್ಯಾದೆ ಕಳೆಯುತ್ತಿ !" ದಿಡ್ ದಿಡ್ಡನೆ ಗುದ್ದಿದ, ಮಹಮದ್ ಬ್ಯಾರಿ.

ಆದರೂ, ಅವಳು ಬಗ್ಗಿದಳೆ ? ಜಗ್ಗಿದಳೇ ?

"ನಮ್ಮನ್ನು ಹೊಡೆಯೋಕೆ-ಬಡಿಯೋಕೆ ಅಲ್ಲವೇ ಈ ದಿಗ್ಬಂಧನ ? ಚಪ್ಪಲಿಯಾಗಿ – ಚೆಂಡಾಗಿ – ತೊತ್ತಾಗಿ – ಸೊತ್ತಾಗಿ ಬಳಸುವುದಕ್ಕೆ ! ಹಹ್ಹಹ್ಹಾಶಾ ! ಹಿಹ್ಹಿಹ್ಹೀೀೀ !

"ಅಕ್ಕಾ ! ಇದೇನು ಹುಚ್ಚು ? ಭಾವಾ ಬರೋದು ಇಂದೇ ! ನೀನು ಒಳಗ್ಹೋಗು !"

"ಹುಶ್ ! ನೀನೂ ಬೇಡ ! ಭಾವಾನೂ ಬೇಡ ! ಯಾರೂ ಬೇಡ ! ಹೋಗು ! ನನ್ನನ್ನು ಬಿಡು ! ದಾರಿ ಬಿಡು ! ರಕ್ತ-ರಕ್ತ ! ಅಲ್ಲ ಮದ ರಂಗಿ ; ಅಲ್ಲ, ಅಲ್ಲವೇ ಅಲ್ಲ ! ರಕ್ತ-ರಕ್ತ !"

ಅವಳು ಮನಸ್ವೀ ಚೀರುತಿದ್ದರೆ ಮಹಮದ್ ಬ್ಯಾರಿ ಬೆಪ್ಪಾಗಿ ನೋಡುತಿದ್ದ.

ಒಳಗಡೆ ಹೆಣ್ಣು ಮಗುವನ್ನು ಎದೆಗೆತ್ತಿಕೊಂಡಿದ್ದ ಫಾತೀಮಾ ಬಿಕ್ಕಿ ಬಿಕ್ಕಿ ಅಳುತಿದ್ದಳು. ಯಾಕೋ ಏನೋ ಆ ಪುಟ್ಟ ಮಗುವೂ ಅಳುತ್ತಲೇ ಇತ್ತು. ಕಂಠಪೂರ್ತಿ ಅಳುತ್ತಲೇ ಇತ್ತು.

ದೂರ ಮರದ ಮೇಲೆ ಕೋಗಿಲೆಯ ಕೂಗು ಕೂಊಊವೂಊ ! ಕೂಊಊಊಊಊವೂಊ !



# ಬಾಂಧವ್ಯ

## ೩

Men are cruel, but Man is kind
—Rabindranath Tagore

....ಪೌಢಾರುಣ ಅತ್ಯಂತ ವಿಜೃಂಭಣೆಯಿಂದ ಬೆಳಗುತಿದ್ದ.
.....ಎಲ್ಲೆಲ್ಲೂ ಸುಡುಬಿಸಿಲಿನ ರಾಣಾರಂಪ. ತೀಕ್ಷ್ಣಾತಿತೀಕ್ಷ್ಣ ರಶ್ಮಿಳ.
.....ವಸಂತ ಪ್ರಭುವಿನ ಒಡ್ಡೋಲಗ ಎಂದರೆ ಹೇಳುವುದೇನು ?

ನಿಮೀಲಿತ ನೇತ್ರಗಳಲ್ಲಿ ಅಶ್ರುಬಿಂದುಗಳು ತಟಪಟನೆ ಉದುರಿದುವೇನೋ. ಅನಂತರ ತನ್ನನ್ನು ತಾನೇ ನಿಗ್ರಹಿಸಿಕೊಂಡು ನ್ಯಾಯಾಲಯದ ತುಂಬೆಲ್ಲಾ ದೃಷ್ಟಿ ಹೊರಳಿಸಿದ. ಒಂದು ಕ್ಷಣ, ಒಂದೇ ಒಂದು ಕ್ಷಣ ಅತ್ತ ಹೊರಳಿದ ದೃಷ್ಟಿ ಹಿಮ್ಮರಳಿತು. ಅವನಿಗೆ ಹಾಗೆ ನೋಡುವ ಬಯಕೆಯು ಇರಲಿಲ್ಲ. ಕಣ್ಣುಗಳು ತಕ್ಕನೆ ಅತ್ತ ಹರಿದು ವಂಚಿಸಿದುವು. ಅವನು ಅಧೋ ಮುಖಿಯಾಗಿ ನ್ಯಾಯಾಲಯದ ಕಟಕಟೆ ಇಳಿದ.

ಜನಜಂಗುಳಿಯಲ್ಲಿ ಬೆರತಿದ್ದ ಕುಟುಂಬಿಗರು ಬಂದು ಸುತ್ತಮುತ್ತ ಮುತ್ತಿಕೊಂಡರು.

"ನಾನೂ ಬರುವೆ. ನನ್ನನ್ನೂ ಕರೆದುಕೊಂಡು ಹೋಗಿ" ಎಂದಳು ಅಧಾರ್ಂಗಿ.

"ನನಗೆ ಸಾವೇಕೆ ಬಾರದೋ ಶಿವನೇ !" ಎಂದು ಕಂಬನಿ ಮಿಡಿದಳು ವೃದ್ಧ ಜನನಿ.

"ದೇವರು ಕೊಟ್ಟ ಭಾಗ್ಯ ! ಹೆದರಬೇಡ ; ಕೊನೆಗೆ ಎಲ್ಲರೂ ಸೇರು ವುದು ಒಂದೆಡೆಯೇ" ಎಂದ ತಂದೆ.

ಎಲ್ಲರ ಕಂಠಗಳೂ ಸ್ಫುರಿಸಿದುದು ಒಡಕು ಸ್ವರವನ್ನೇ. ದುಃಖಾತ್ರ ಹೃದಯಗಳು ಮೌರಿ ಮಿಡಿ ಮಿಡಿಯುತಿದ್ದುವು. ಕಂಬನಿಗಳು ಜಿಲುಮೆ ಯಂತೆ ಹರಿಯುತಿದ್ದುವು. ಸಾಧು ಯಾರೆಡೆಗೂ ಹುಚ್ಚೆತ್ತಿ ನೋಡದಾದ. ಕೋಳ ಹಿಡಿದ ಪೋಲಿಸಿನವ ಆವಸರಿಸಿದ,

"ನಡಿಯಪ್ಪಾ, ನಡಿ !"

ಕೆಲವು ಸ್ನೇಹಿತರುಗಳು, ಅಣ್ಣತಮ್ಮಂದಿರು ಹಿಂದೆಯೇ ಬಂದರು. ವ್ಯಾನಿಗೆ ಹತ್ತುವವರೆಗೂ ಹಿಂಬಾಲಿಸಿತು ಜನಸ್ತೋಮ. ವ್ಯಾನಿಗೆ ಹತ್ತಿ ಹಿಂತಿರುಗಿ ನೋಡಿದಾಗ ಕೆಲವು ಮಂದಿ ಮುಖ ಮುಚ್ಚಿಕೊಂಡು ಅಳುತಿ ದ್ದುದು ದೃಷ್ಟಿಗೆ ಬಿತ್ತು. ದೃಷ್ಟಿಯನ್ನು ಆತ ಮತ್ತೆ ಅತ್ತ ಹರಿಸದಷ್ಟು ಎಚ್ಚರ ವಹಿಸಿದ. ಹಾರ್ನ ಮಾಡಿ ಚಲಿಸಿತು ವ್ಯಾನು. ಸ್ವಲ್ಪೇ ಹೊತ್ತಿ ನೊಳಗಾಗಿ ಆ ಜನ ಜಂಗುಳಿ ಮಾತ್ರವಲ್ಲ, ಕೋರ್ಟಿನ ಕೆಂಪು ಕಟ್ಟಡವೂ ಕಣ್ಮರೆಯಾಯಿತು. ಒಮ್ಮೆ ಅತ್ತ ನೀರಸ ನೋಟ ಬೀರಿ ತಲೆ ಬಾಗಿದ. ಹೃದಯ ಮಸ್ತಿಷ್ಕಗಳು ನಿಷ್ಕ್ರಿಯವಾದಂತೆ ಭಾಸವಾಯಿತು. ಹೀಗೆಯೇ ಪ್ರಾಣ ಹೋಗಿದ್ದರೆ ಮುಂದಿನ ಘೋರ ಪ್ರಕರಣ ಇರುತ್ತಿರಲಿಲ್ಲ, ಎಂಬ ಯೋಚನೆಯೂ ಬಂತು. ಆದರೆ, ಆ ಪ್ರಾಣ ಬಯಸಿದಾಗ ಹೋಗಬೇಕಲ್ಲ ? ಎದೆಯಾಳದಿಂದ ಬಿಸಿಯುಸಿರೊಂದು ತನಗರಿಯದಂತೆಯೇ ತಪ್ಪಿಸಿ ಕೊಂಡಿತು.

ಕೆಲವೇ ಕೆಲವು ನಿಮಿಷಗಳೊಳಗಾಗಿ ಪಯಣ ಕೊನೆಗೊಂಡು ಸೆಂಟ್ರಲ್ ಜೈಲಿನ ಬಾಗಿಲ ಬಳಿ ಬಂದು ನಿಂತಿತು ವ್ಯಾನು. ಪೋಲೀಸರು ಖೈದಿಯನ್ನು ಒಳಗಡೆ ಕರೆದೊಯ್ದರು. ಕೆಲಸ ಮಾಡಿ ಹಿಂದಿರುಗುತಿದ್ದ ಖೈದಿಗಳನೇಕರು ಮಿಳ್‌ಮಿಳ್ಳನೆ ಇತ್ತಲೇ ನೋಡಿದರು.

ಅಲ್ಲಿ ಅಂತಹ ಹೂದೋಟವೇನೂ ಇರಲಿಲ್ಲ. ಅಲ್ಲಲ್ಲಿ ಕೆಲವೇ ಕೆಲವು ಗಿಡಗಳನ್ನು ಬೆಳೆಸಿದ್ದಾರೆ. ಒಂದೆರಡು ದಾಸವಾಳದ ಗಿಡಗಳು ಪುಷ್ಪಭರಿತ ವಾಗಿದ್ದುವು.

ಹೆಬ್ಬಾಗಿಲಿನ ಬಳಿಯೇ ವಾರ್ಡನ್ನರ ಆಫೀಸು. ಅತ್ತ ಕಣ್ಣು ಹೊರಳಿ

ಸದೆ ಒಳಹೆಜ್ಜೆಯಿಟ್ಟ. ತನ್ನ ಕೊಠಡಿಯ ಬಲಪಾರ್ಶ್ವದಲ್ಲಿ ಇನ್ನೂ ಕೆಲವು ಕೊಲೆಗಡುಕರ ಕೊಠಡಿಗಳಿದ್ದುವು. ಈವರೆಗೆ ಅವರೊಂದಿಗೆ ಮಾತಾಡಿರಲಿಲ್ಲ. ಖೈದಿಗಳಲ್ಲಿ ಯಾರ್ಯಾರಿಗೆ, ಯಾವ ಕಾರಣಕ್ಕೆ ಜೈಲಾಯಿತು ಎಂಬುದನ್ನು ತಿಳಿದುಕೊಳ್ಳುವುದರಲ್ಲಿ ತುಂಬಾ ಕುತೂಹಲವಿರುವುದು ಸಹಜ. ಒಬ್ಬರ ನ್ನೊಬ್ಬರು ಕೇಳಿಯೂ ಕೇಳುತ್ತಾರೆ. ಇವನಿಗೆ ಅದರ ಪರಿವೆಯೇ ಇರಲಿಲ್ಲ. ಹಣೆಯ ಮೇಲೆ ಶ್ರಮಬಿಂದುಗಳು ಮೂಡಿದ್ದುವು. ಕಣ್ಣುಗಳಂಚಿನಲ್ಲಿ ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡುತಿತ್ತು. ಕಾಲುಗಳು ನಡೆಯಲಾರದೆ ನಡೆಯುತಿದ್ದುವು. ಅಂದಿನ ಆ ಘಟನೆ ಮನದಲ್ಲಿ ಸುಳಿದಳಿಯಿತು.

ಇವನನ್ನು ನೋಡುತ್ತಲೂ ವಾರ್ಡ್‌ಬಾಯ್ ಏಳನೆಯ ಕೊಠಡಿಯ ಕದವನ್ನು ತೆರೆದ. ಕೂಡಲೇ ಒಳಗಡೆ ತಳ್ಳಿ ಬೀಗ ಹಾಕಲಾಯಿತು.

ಕಲ್ಲಿನ ಗೋಡೆ. ಬಲವಾದ ಕಬ್ಬಿಣದ ಸರಳುಗಳುಳ್ಳ ಹರವಾದ ಕಿಟಕಿ. ಈ ಲಜ್ಜಾಸ್ಪದವಾದ ಮುಖವನ್ನು ತೋರುವುದಕ್ಕಿಂತ ಕಿಟಕಿಗೆ ಕದಗಳಿದ್ದಿದ್ದರೆ ಮುಚ್ಚಿಕೊಳ್ಳಬಹುದಾಗಿತ್ತು ಎಂಬಷ್ಟು ಕಿಸಿಸಿಗೆ. ಖಿನ್ನ ಭಾವದಿಂದ ಮೈ ಮುದಡಿ ಕುಳಿತ. ಗತಕಾಲದ ಚಿತ್ರಣವೆಲ್ಲಾ ಚಲನ ಚಿತ್ರದಂತೆ ತೇಲಿ ಹೋಯಿತು ಚಿತ್ತಭಿತ್ತಿಯಲ್ಲಿ.

*    *    *    *

ಓಲೆಭಾಗ್ಯದ ಆರ್ತಾರ್ತ ಬೇಡಿಕೆಯನ್ನು ರಾಜ್ಯಪಾಲರ ಮುಂದಿಟ್ಟಿದ್ದಳು ಮಡದಿ. ಅದರ ಪರಿಶೀಲನೆಯಿಂದಾಗಿ ಮರಣಶಿಕ್ಷೆಯನ್ನು ಮುಂದೂಡಿತು ಸರಕಾರ. ತನ್ನ ಜೀವಮಾನ ಹದಿಮೂರನೇ ತಾರೀಖಿಗೆ ಮುಗಿದುಹೋಗುತ್ತೆ ಎಂಬುದನ್ನು ಯಾಕೋ ಆತ್ಮಶಃ ಒಪ್ಪಿಕೊಳ್ಳಲು ಸಾಧ್ಯವಾಗಿರಲಿಲ್ಲ. ಅಂತಲೇ ಭಗವಂತ ಮುಂದೂಡಿರಬೇಕು ಎಂಬ ಭಾವನೆ ಮನದಲ್ಲಿ. ನಿರ್ನಿಮೇಶ ನಯನಗಳಿಂದ ಆಕಾಶ ನೀಲಿಯನ್ನು ನಿಟ್ಟಿಸಿದ. ಬಿಳಿಯ ಮುಗಿಲ ಶಿಶುವೊಂದು ಮನಮೋಹಕವಾಗಿ ತೇಲುತ್ತಿದೆ ನೀಲಿಯ ಮೇಲೆ. ತಾನು ಅಪರಾಧೀ ಸ್ಥಾನದಲ್ಲಿ ನಿಲ್ಲುವ ಒಂದೆರಡು ತಿಂಗಳ ಮುಂಚೆ ಗತಿಸಿದ ಮಗು–ಮಾಣಿಕ್ಯ ಸ್ಮರಣೆಯ ಹಾದಿಯಲ್ಲಿ ತೇಲಿ ಹೋದಳು. ಯಾವುದೋ ವಿಶಿಷ್ಟ ಸಂದರ್ಭಕ್ಕಾಗಿ ಹೇಳಿ ಮಾಡಿಸಿದ ಬೊಂಬೆಯಂತೆ ಸುಂದರವಾದ ಮಗಳು ಮೂರು ವರ್ಷ ತುಂಬುವ ಮುನ್ನ

ವಿಧಿವಶಳಾದಳು. ತನ್ನ ಬಂಧು-ಜೀವ-ವಲಯದಲ್ಲಿ ಎಂಟು ಹತ್ತು ಮಕ್ಕಳ ನೊತ್ತಕ್ಕೆ ಕೊರತೆಯೇ ಇಲ್ಲ. ಹೊಟ್ಟೆಗಿದ್ದರೆ ಬಟ್ಟೆಗಿಲ್ಲ ; ಬಟ್ಟೆಗಿದ್ದರೆ ಹೊಟ್ಟೆಗಿಲ್ಲದ ಬಡ ಬಂಧುಗಳು. ಆ ಎಲ್ಲರ ಮುಂದೆ ವಿನಾಕಾರಣ ತನ್ನ ಮಾಣಿಕ್ಯವನ್ನು ವಿಧಿ ಅಪಹರಿಸಿತು. ಭಗವಂತ ನೀಡಿದ್ದು ಒಂದೇ ಮಗು. ಅದಕ್ಕೂ ಉಳಿಗಾಲವಿಲ್ಲ.

ಹಾಯ್ !

ಹಿಂದೆಯೇ ಕಣ್ಣೀರಿನ ಕಟ್ಟೆಯೊಡೆಯಿತು.

ಇಲ್ಲಿಯವರಾರಾದರೂ ನೋಡಿದರೆ ಜೀವಗಳ್ಳ ಸಾವಿಗಾಗಿ ಅಳುತಿದ್ದಾನೆ ಎಂದಾರು ! ಆಜೀವ ಪರ್ಯಂತ ಇಲ್ಲಿ ನರಳುವುದಕ್ಕಿಂತ ನೇಣುಗಂಬ ಪರಮಲೇಸು.

ಆಲೋಚನೆಯಲ್ಲಿ ಸಿಕ್ಕಿ ಅದೆಷ್ಟು ಹೊತ್ತು ಮಂತ್ರದ್ರಷ್ಟನಂತೆ ಕುಳಿತಿದ್ದನೋ.....ಕಾತರ ದೃಷ್ಟಿ ಪುನಃ ಮುಗಿಲ ಶಿಶುವಿನೆಡೆಗೆ ಹರಿದಾಗ ಅದು ತೊರೆಯ ಪ್ರವಾಹದಂತೆ ಉದ್ಬುದ್ಧವಾಗಿ ಹರಿಯುತಿತ್ತು ; ನನ್ನ ಮಾಣಿಕ್ಯ ಇದೇ ರೀತಿ ಹರಿದುಹೋದಳು ಎಂದುಕೊಂಡ. ಏನೋ ಒಂದು ರೀತಿಯ ಸ್ವಪ್ನಾವೇಶದಲ್ಲಿ ಚಿತ್ತ ಉತ್ಕ್ರಾಂತವಾಗತೊಡಗಿತು. ಕಣ್ಣಂಚಿನಲ್ಲಿ ತುಂಬಿದ್ದ ಹನಿಗಳು ತಟಪಟನೆ ಕೆನ್ನೆಯ ಮೇಲುರುಳಿದುವು. ನೀಲಿ ಚೌಕಳಿಯ ಬಿಳಿಯುಂಗಿಯನ್ನು ಕಣ್ಣುಗಳಿಗೊತ್ತಿಕೊಂಡಾಗ ಅದು ಎಷ್ಟೆಷ್ಟು ಮಂದಿಯ ಕಣ್ಣೀರನ್ನು ಹೀರಿದೆಯೋ ಎನ್ನಿಸಿತು. ಆ ಮುಹೂರ್ತದಲ್ಲಿ ಮೂಡಿದ ಮಾನಸಿಕ ವೇದನೆ ನರನರಗಳನ್ನೂ ಸುಡುತ್ತಿರುವಷ್ಟು ಹಿಂಸ್ರಕ. ಕತ್ತರಿಗಾಣದ ಕೂದಲರಾಶಿ ಹಣೆ, ಕಣ್ಣುಗಳವರೆಗೂ ಇಳಿಯುತ್ತದೆ. ಹಿಂದೂಡಿದಷ್ಟೂ ಅವು ಬರುವುದು ಅಲ್ಲಿಗೇ.

ಶರೀರದಲ್ಲಿ ಏನೋ ಒಂದು ವಿಧವಾದ ಅವಶ ಜಡಿಮೆಯಿಂದ ಅತೀವ ಭಾರಾಕ್ರಾಂತತೆ. ಇತರ ಖೈದಿಗಳಂತೆ ಕೈಗೆ ಕೆಲಸವಿದ್ದಿದ್ದರೆ ಮನೋವೇದನೆಯೇ ಇರುತಿರಲಿಲ್ಲ. ನಾಲ್ಕು ಗೋಡೆಯ ಬಂಧನ ನನ್ನ ಅಸ್ತಿತ್ವವನ್ನು ಕಳೆದು ಅಭಿಭೂತಗೊಳಿಸುತ್ತದೆ. ಹುಟ್ಟಿದ ಮೇಲೆ ಸಾವು ಅನಿವಾರ್ಯ. ಅದಕ್ಕಾಗಿ ಚಿಂತೆಯಿಲ್ಲ. ಆದರೆ.....!

ನೋಟ ಅನಿರೀಕ್ಷಿತವಾಗಿ ಅಂಗಳದ ಕಡೆ ಹರಿಯಿತು. ಸುದೂರದಲ್ಲಿದ್ದ ಹಸುರು ಗಿಡದ ಮೇಲೆ ಕೆಂಪಿನ ಆಭರಣ ತೊಡಿಸಿದಂತೆ ಅರಳಿದ ದೊಡ್ಡ ಹೂವು ! ಬಹುಶಃ ದಾಸವಾಳವೇ ಇರಬೇಕು. ತಂಗಾಳಿಯ ಹೊಡೆತಕ್ಕೆ ಅತ್ತಿತ್ತ ಅಲುಗುತಿದ್ದ ಅದು ತಂಗಾಳಿ ತಗ್ಗಿದ ಮೇಲೆ ಇತ್ತ ಮೊಗ ಮಾಡಿ ನಿಲ್ಲುತ್ತದೆ. ಖೈದಿ ಅದನ್ನೇ ನಿಟ್ಟಿಸಿದ. ಜೈಲಿನ ಕ್ರೂರ ವಲಯದಲ್ಲಿ ಎಂತಹ ಸತ್ಯ ಸುಂದರ ವಸ್ತು ! ನನ್ನ ಮುದ್ದು ಮಗಳು ಮಾಣಿಕ್ಯ ಅಂತಹ ಹೂವುಗಳಿಗಾಗಿ ಎಷ್ಟೊಂದು ಆಸೆ ಪಡುತ್ತಿದ್ದಳೊ.....ಭಗವಂತ ದಯಾನಿಧಿ ಎನ್ನುತ್ತಾರೆ. ಆದರೆ, ಅವನೆಂತಹ ನಿಷ್ಕರುಣಿ ಎಂಬುದನ್ನು ಬಲ್ಲವರೇ ಬಲ್ಲರು.

* * * *

ಕಬ್ಬಿಣದ ಆವರಣದ ಕೆಳಭಾಗದಲ್ಲಿದ್ದ ಚಿಕ್ಕ ಕಿಂಡಿಯ ಮೂಲಕ ಗಂಡು ಕೈಯೊಂದು ಊಟದ ತಟ್ಟೆಯನ್ನು ಮುಂದೂಡಿತು. ಅದರ ಅರುಚಿ-ಅಶುಚಿಗಳನ್ನು ನೋಡಿದರೆ ಮುಟ್ಟಲು ಮನಸ್ಸು ಬರುವುದಿಲ್ಲ. ಹೊಟ್ಟೆ ಹಸಿವೆಗಾಗಿ ತಿನ್ನುವುದು ಅನಿವಾರ್ಯ. ನಾಲ್ಕಾರು ತುತ್ತು ತಿನ್ನುವುದರೊಳಗೇ ಜುಗುಪ್ಸೆ. ಅಲ್ಲಿಗೇ ಬಿಟ್ಟು ನೀರು ಕುಡಿದ.

ಪೋಲೀಸಿನವ ಕಿಟಕಿಯ ಬಳಿ ಬಂದು ವಿಚಾರಿಸಿದ,

"ಹೇಗಿದ್ದೀಯಪ್ಪಾ ?"

"ಇನ್ನು ಹೇಗಿದ್ದರೇನು ?"

"ಏಕಪ್ಪಾ ಅಷ್ಟು ಉದಾಸೀನ ? ನೀನು ದಿನಾ ಊಟ ಸರಿಯಾಗಿ ಮಾಡುತ್ತಿಲ್ಲವಂತೆ ? ಹಾಗೆಲ್ಲಾ ಮಾಡಬಾರದು. ಇರುವಷ್ಟು ದಿನ ಸುಖವಾಗಿರಬೇಕು. ತಿಳಿಯಿತೆ ?"

"ಸೇರಿದಷ್ಟು ಮಾಡಿದೆ. ಅದಕ್ಕಿಂತ ಹೆಚ್ಚಾಗಿ ನನ್ನಿಂದಾಗದು."

"ಹಾಗೆಂದರೆ ಹೇಗಪ್ಪಾ ?"

"..............."

"ಈಗಲೇ ಏಕೆ ದೇಹ ಸವೆಸುತ್ತಿ? ನಿನಗೇನಾದರೂ ಆಸೆಯಿದೆಯೇ?"

"ನನಗೆ ಯಾವ ಆಸೆಯೂ ಇಲ್ಲ."

ಅವನು ನಿಧಾನವಾಗಿ ತಲೆಯಾಡಿಸಿದ.

"ಅಷ್ಟೇಕೆ ನಿರಾಸೆ? ದೇವರು ದೊಡ್ಡವನು! ಭವಿಷ್ಯವನ್ನು ಯಾ
ರೀತಿ ರೂಪಿಸುತ್ತಾನೋ ಯಾರಿಗೆ ಗೊತ್ತು? ಅಲ್ಲಿಯತನಕವಾದರೂ ಕಾ
ನೋಡಬೇಕಲ್ಲ?"

"ಅಯ್ಯೋ, ಎಲ್ಲಿಯ ದೇವರೋ.....?"

ಮರುಗಳಿಗೆಯಲ್ಲಿ ಇನ್ನೊಬ್ಬ ಪೋಲೀಸಿನವನೊಂದಿಗೆ ತಂದೆ, ತಾಯಿ
ಪತ್ನಿ ಕಿಟಕಿಯ ಬಳಿ ಬಂದು ನಿಂತರು. ಜಾಗರಖಿನ್ನ ನೇತ್ರಗಳಲ್ಲಿ ರಂ
ಮೂಡಿತ್ತು. ಅಪಾರವಾದ ವ್ಯಥೆ ತುಂಬಿದ ಅವರ ಮನಃಸ್ಥಿತಿ ಅತ್ಯಂ
ಕರುಣಾಜನಕ.....ಜೀವಚ್ಛವಗಳಂತೆ ನಡೆದು ಬಂದ ಅವರನ್ನು ನೋಡಿ
ಕೂಡಲೇ ಧಿಗ್ಗನೆದ್ದು ಕಿಟಕಿಯ ಬಳಿಗೆ ಬಂದ.

"ಪರವಾನಗಿ ಹೇಗೆ ಪಡೆದುಕೊಂಡಿರಿ ಅಪ್ಪಾ?"

"ವಾರ್ಡನ್ನರ ಕಾಲಿಗೆ ಬಿದ್ದಿದ್ದಾಯ್ತು; ಹೆಂಗಸರು ಅತ್ತು ಗೋಳಾಡಿ
ದರು. ಅದಕ್ಕೇ ಬಿಟ್ಟಿದ್ದಾರೆ."

ಪೋಲಿಸಿನವ ನಡುವೆ ಬಾಯಿ ಹಾಕಿದ,

"ನೀವು ವೃಥಾ ಅವಸರ ಪಟ್ಟಿರಿ. ನಿಮ್ಮನ್ನು ಸರಕಾರವೇ ಕರೆಸಿ
ಕೊಳ್ಳುತಿತ್ತು!"

ಆ ಮಾತು ಕೇಳಿದಾಗ ದೇಹದಾದ್ಯಂತ 'ಜುಂ'ನೆ ವಿದ್ಯುಲ್ಲಹರಿಯಂತೆ
ಚಳಿಯ ರ್ಝುರಿ ಹರಿದಾಡಿ ಹೋಯಿತು. ಮಾಧು ಅತ್ಯಂತ ಸಂಕಟದಿಂದ
ತಲೆಬಾಗಿದ. ತಾಯಿ ಕಿಟಕಿಯಲ್ಲಿ ಕೈಹಾಕಿ ಮೈದಡವುತ್ತ ದುಃಖಪೂರ್ಣ
ಧ್ವನಿಯಲ್ಲಿ ನುಡಿದಳು,

"ತುಂಬ ಸೊರಗಿದ್ದಿ ಮಗನೇ! ಊಟ ಕೊಡುತ್ತಾರೋ ಇಲ್ಲವೋ,
ನಿನ್ನ ನೋಡಿದರೆ ತುಂಬಾ ಸಂಕಟವಾಗುತ್ತೆ."

"ಊಟ ಕೊಡುತ್ತಾರೆ ಅವ್ವಾ! ಅದಕ್ಕೇನೂ ಕೊರತೆಯಿಲ್ಲ."

ಪೋಲೀಸಿನವ ದನಿಗೂಡಿಸಿದ,

"ನಾನೀಗ ಅದೇ ಹೇಳುತ್ತಲಿದ್ದೆ. ಊಟ ತಟ್ಟೆಯಲ್ಲಿ ಅರ್ಧರ್ಧ
ಹಾಗೇ ಇರುತ್ತೆ. ಅವನು ಸರಿಯಾಗಿ ಉಣ್ಣುವುದೇ ಇಲ್ಲ. ಚಿಂತೆ ಮನಸ್ಸಿಗೆ
ಹಚ್ಚಿಕೊಂಡಿದ್ದಾನೆ."

"ದೇವರು ಹೆತ್ತೊಡಲಿಗೆ ಸಂಕಟವೂಡಿಸಿಬಿಟ್ಟ."

ಮಡದಿ ಮಾತಿಲ್ಲದೆ ಮುಸಿ ಮುಸಿ ಅಳುತ್ತಲೇ ಇದ್ದಳು.

"ಯಾಕಳ್ತೀಯಾ ಮಗಳೇ? ದೇವರು ನಿಮಗೆ ಕೊಟ್ಟ ಋಣಾನುಬಂಧ ಇಷ್ಟೆ. ಮಗ ಇಲ್ಲ ಅಂತ ನಿನ್ನ ನಾವೇನು ಹೊರದೂಡುವುದಿಲ್ಲ ಬಿಡು. ಇದ್ದುದರಲ್ಲಿ ಹಂಚಿ ಉಣ್ಣುವಾ" ಎಂದ ಯಜಮಾನ.

"ಹೌದಪ್ಪಾ, ಏನೋ ಕೆಟ್ಟ ದೆಶೆ ಬಂದುಬಿಡುತ್ತೆ. ಅವನ್ನೆಲ್ಲ ಆ ನಮ್ಮಪ್ಪ–ಬ್ರಹ್ಮ ಬಂದರೂ ತಪ್ಪಿಸುತ್ತಾನೋ ಇಲ್ಲವೋ...." ಎಂದ ಪೋಲೀಸಿನವ.

ಮೂಕ ಮೌನಗತಿಯಲ್ಲಿ ಹರಿಯುತಿತ್ತು ಮಡದಿಯ ದುಃಖ ಪ್ರವಾಹ.

* * * *

ತಂದೆ ತನ್ನ ಗಂಟನಿಂದ ಕೆಲವು ಪದಾರ್ಥಗಳನ್ನು ತೆಗೆದು ಮುಂದಿಟ್ಟು ಹೇಳತೊಡಗಿದ.

"ಇದು ಚಕ್ಕುಲಿ, ಇದು ತಂಬಿಟ್ಟು ತಿನ್ನು ಮಗನೇ! ನಿನಗೆಂದು ತುಪ್ಪದಲ್ಲಿ ಮಾಡಿದಾಳೆ ಸೊಸೆ. ಹೊಟ್ಟೆ ತುಂಬಾ ತಿನ್ನು. ನೋಡೋಣ 'ಓಲೆ ಭಾಗ್ಯ'ದ ಬೇಡಿಕೆಗೆ ಸರಕಾರ ಕರುಣೆ ತೋರುವುದೋ ಏನೋ. ನೀನು ಮನಸ್ಸಿಗೆ ವ್ಯಥೆ ಹಚ್ಚಿಕೊಂಡು ಏಕೆ ಮೈ ಕೆಡಿಸಿಕೊಳ್ಳುತ್ತಿ?"

"ನಾನು ಹಲವು ದೇವರಿಗೆ ಹರಕೆ ಹೊತ್ತಿರುವೆ ಮಗನೇ! ಯಾವ ದೇವರಾದರೂ ಕರುಣೆದೋರಿದರೆ ಸಾಕು," ಎಂದಳು ತಾಯಿ.

"ನೀನು ಹೊಟ್ಟೆ ತುಂಬಾ ಉಣ್ಣು ಮಗನೇ! ಉಣ್ಣದೆ ಸೊರಗಿದ್ದಿ....."

ಆತ ಇನ್ನೂ ಏನೇನೋ ಹೇಳುತ್ತಲೇ ಇದ್ದಾನೆ. ಅವೊಂದೂ ಆತನ ಕಿವಿಗೆ ಬಿದ್ದಂತೆಯೇ ಇಲ್ಲ. ಗಮನ ಎಲ್ಲೋ. ದೃಷ್ಟಿ ಎಲ್ಲೋ. ಕಾಷ್ಠ ಪ್ರತಿಮೆಯಂತೆ ನಿಂತಿದ್ದ. ಎದೆಯಾಳದಲ್ಲಿ ಬಿಸಿಯುಸಿರು ಸಿಕ್ಕಿಕೊಂಡಂತೆ ತಡೆತಡೆದು ಹರಿದಾಡುತಿತ್ತು. ಮುಂದಿನ ಜೀವನ ವ್ಯವಸ್ಥೆಯ ಬಗ್ಗೆ ಮಾತಾಡುವುದು ಏನೇನೋ ಇತ್ತು. ಪ್ರಯತ್ನಿಸಿದರೂ ನಾಲಿಗೆ ಹೊರಳಲಿಲ್ಲ. ಗದ್ದೆಗಣ್ಣುಗಳ ವಿಚಾರ ತಲೆಯಲ್ಲಿ ತುಂಬಿತ್ತು. ಈಚೀಚೆಗೆ ಸ್ವಲ್ಪ ಜಮೀನಿನಲ್ಲಿ

ಹೆಚ್ಚು ಬೆಳೆ ತೆಗೆಯುವ ವಿಧಾನಗಳು ಬಂದಿವೆ. ಗೆಳೆಯರನೇಕರು ಸಾಹ
ಪೂರ್ವಕವಾಗಿ ಕೆಲಸ ಮಾಡುತಿದ್ದಾರೆ. ತನಗೆ ಇದೊಂದು ಅಡ್ಡ
ಬರದಿದ್ದರೆ....?

ಯೋಚನೆಯ ಚಕ್ರ ತಲೆಯಲ್ಲಿ ಸುಳಿ ಸುತ್ತುತ್ತಲೇ ಇತ್ತು. ಭಾ
ವಾದ ಹೃದಯವನ್ನು ಹೊರಲಾರದೇ ಹೊತ್ತು ಕಾಲುಗಳು ಬಳುಕಿದುವು.
ಮಡದಿ ಮುಸಿಮುಸಿ ಅಳುತ್ತಲೇ ಇದ್ದಾಳೆ. ಅವಳನ್ನು ಕಿಟಕಿಯಲ್ಲಿ ಕೈ
ಹಾಕಿ ಮೈದಡವುವ ಮನಸ್ಸು. ಸುತ್ತಮುತ್ತ ಜನರಿದ್ದುದರಿಂದ ಸಂಕೋಚ.
ಹಣೆಯ ಮೇಲೆ ಶ್ರಮಬಿಂದುಗಳು ತುಂತುರು ತುಂತುರಾಗಿ ಮೂಡಿದ್ದುವು.
ಅಂತರಂಗಿಕ ದುಃಖ-ಸಂಕಟ-ಚಿಂತೆಗಳೆಲ್ಲ ಮುಖಮುದ್ರೆಯಲ್ಲಿ ಹೊಮ್ಮಿ
ದುವು. ಯಾವುದೋ ಕಾಣದ ಕೈ ಗಂಟಲನ್ನು ಅದುಮಿ ಹಿಡಿದಂತೆ ಕಟ್ಟಿ
ಹೋಗಿತ್ತು ಬಾಯಿ.

"ಅಷ್ಟುದೂರದಿಂದ ಬಂದು ವಾರ್ಡನ್ನರ ಕಾಲು ಕಟ್ಟಿ ನಿನ್ನನ್ನು
ನೋಡಲು ಬಂದರೆ ಒಂದು ಮಾತೂ ಆಡದಿದ್ದೀಯಲ್ಲ ?" ಎಂದಳು
ತಾಯಿ, ದನಿಯಲ್ಲಿ ಸಂಕಟದ ಝರಿಯನ್ನು ಹರಿಸಿ.

"ನನಗೇನು ಹೇಳುತ್ತೀರಿ ?" ಎಂದು ಕರಳು ಕಿತ್ತು ಬರುವಂತೆ ಕೇಳಿ
ಕೊಂಡಳು ಮಡದಿ.

ಇಬ್ಬರ ಪ್ರಶ್ನೆಗೂ ಒಂದೇ ಉತ್ತರ ನೀಡಿದ ಮಾಧು,

"ಎಲ್ಲಾ ದೈವೇಚ್ಛೆ ! ನಾನು ಏನು ಹೇಳಬಲ್ಲೆ ?" ಎದೆಯಾಳದಿಂದ
ಹೊಮ್ಮಿದ ಧ್ವನಿ ವಿಜಾತೀಯವಾಗಿತ್ತು. ಬಾಗಿದ ತಲೆ ಎತ್ತಲಾರದೇ
ಎತ್ತಿ ನುಡಿದಿದ್ದ.

"ನಿನ್ನನ್ನು ನೋಡುವುದಕ್ಕೆ ಸರಾಗವಾಗಿ ಬಿಡುವಂತಿದ್ದರೆ ಆಗಾಗ
ತಿಂಡಿತಿನಿಸು ಸಹಿತ ಬಂದು ನೋಡಬಹುದಾಗಿತ್ತು. ನೋಡುವುದಕ್ಕೂ
ಬಿಡುವುದಿಲ್ಲವಲ್ಲ ಮಗನೇ ?" ಎಂದು ಗೋಗರೆದಳು ತಾಯಿ. ಹೃದಯ
ಒಮ್ಮೆಗೇ ಕಿತ್ತು ಬಾಯ್ಗೆ ಬರುವಂತಹ ಸಂಕಟದಿಂದ.

"ಏಕೆ ಅಷ್ಟು ಗೋಳಾಡುವಿರಿ ? ರಾಜ್ಯಪಾಲರು ದಯೆದೋರು
ತ್ತಾರೋ ನೋಡೋಣ" ಎಂದ ಪೋಲೀಸಿನವ ಒಂದು ಗಳಿಗೆ ಸುಮ್ಮನಿದ್ದು
ಪುನಃ ಮುಂದುವರಿದ "ವಿಷಗಳಿಗೆ ಎಲ್ಲರ ಜೀವನದಲ್ಲೂ ಬರುತ್ತದೆ.

ಮನುಷ್ಯ ಅಂದಮೇಲೆ ಉಪ್ಪು-ಕಾರ ತಿಂದ ಮೈಮನ ತಪ್ಪು ಮಾಡಿಯೇ ಮಾಡುತ್ತವೆ. ಅದೇನು ಮಹಾ ವಿಚಾರವಲ್ಲ....ಹುಟ್ಟಿದ ಮೇಲೆ ಎಲ್ಲರೂ ಸಾಯುತ್ತಾರೆ. ಸಾಯುವ ಗಳಿಗೆ ಬಂದಾಗ ಎಲ್ಲಿದ್ದರೆ ತಾನೇ ಸಾವು ಬಿಟ್ಟೀತು ? ನೀವು ಬಿಡುಗಡೆ ಮಾಡಿಸಿ ಮನೆಗೆ ಕರೆದೊಯ್ದರೂ ಆ ದಿನಕ್ಕೆ ಆಯಸ್ಸು ಮುಗಿದಿದ್ದರೆ ನೀವೇನು ಮಾಡುತ್ತೀರಿ ?.....ಇದೆಲ್ಲಾ ಯಾರ ಕೈಲುಂಟು ? ನಾವೆಲ್ಲಾ ನಿಮಿತ್ತ ಮಾತ್ರ. ಭಗವಂತನ ದಯೆ ಇಲ್ಲದಿದ್ದರೆ ಏನೂ ನಡೆಯಲಾರದು."

"ನಿಜ" ಎಂಬಂತೆ ತಲೆದೂಗಿದ ಯಜಮಾನ.

ಜನನಿ ಎಲ್ಲರ ವಿಚಾರಧಾರೆಯನ್ನು ಜೀರ್ಣಿಸಿಕೊಂಡರೂ ಕಣ್ಣುಗಳ ಕೋಡಿ ನಿಲ್ಲಲಿಲ್ಲ. ಇನ್ನು ಬದುಕಿನುದ್ದಕ್ಕೂ ಸೈಪರಿಲ್ಲದೆ ನರಳುವುದಕ್ಕಿಂತ ತಾನೇ ಮುಂದಾಗಿ ಹೋಗಿದ್ದರೆ ಒಳ್ಳೆಯದಿತ್ತು. ಹೇಗೂ ತನ್ನ ಮಗ ಅದೇ ಹಾದಿ ಹಿಡಿದಿದ್ದಾನೆ. ಮೊಮ್ಮಗಳೂ ಮುಂದಾಗಿ ಹೋಗಿ ಕಾದಿದ್ದಾಳೆ ಎಂದೆಲ್ಲಾ ಯೋಚಿಸಿತು ದಿಕ್ಕೆಟ್ಟ ಮನಸ್ಸು.

ಸೊಸೆಯ ತಲೆಯ ಮೇಲೆ ಕೈಯಿಟ್ಟು "ಪಾಪ, ಹೆಣ್ಣು ! ಅತ್ತೂ ಅತ್ತೂ ಸೊರಗಿದ್ದಾಳೆ. ಅವಳಿಗಾರು ಗತಿ ಹೇಳು. ಇದ್ದೊಬ್ಬ ಮಗಳನ್ನೂ ವಿಧಿ ಕಿತ್ತುಕೊಂಡಿತು. ಭಗವಂತ ಎಂತಹ ಸಂಕಷ್ಟ ತಂದಿಟ್ಟ ?" ಎಂದು ಕಣ್ಣುಗಳನ್ನು ತೀಡಿಕೊಂಡಳು, ತಾಯಿ.

ಮಾಧು ಏನೋ ಹೇಳಲು ಪ್ರಯತ್ನಿಸಿದರೂ ಸಫಲನಾಗಲಿಲ್ಲ. ತನ್ನ ಸತ್ತ್ವ ಎಲ್ಲವೂ ಸಮೂಲವಾಗಿ ಆಲೋಡಿತವಾದಂತೆ ಭಾಸವಾಯಿತೇನೋ ಸುಮ್ಮನೆ ತಲೆ ಬಾಗಿದ.

ಅವರನ್ನು ಕರೆ ತಂದಿದ್ದ ಪೋಲೀಸಿನವ ಅವಸರಿಸಿದ,

"ನಿಮಗೆ ಖೈದಿಯನ್ನು ನೋಡಲು ಅವಕಾಶ ಕೊಟ್ಟದ್ದು ಹದಿನೈದು ನಿಮಿಷ ಮಾತ್ರ. ಆಗಲೇ ಹೊತ್ತು ಮೀರುತ್ತ ಬಂತು. ಇನ್ನು ಹೊರಡಿ. ಸಾಹೇಬರಿಗೆ ತಿಳಿದರೆ ನಿಮಗೆ ಇನ್ನೊಂದು ಬಾರಿ ನೋಡಲು ಅವಕಾಶ ಕೊಡುವುದಿಲ್ಲ."

"ಬಿಡದೆ ಏನು ? ಅವರಿಗೆ ಹೆಂಡಿರು ಮಕ್ಕಳಿಲ್ಲವೇ ?"

ಯಜಮಾನನ ಪ್ರಶ್ನೆಗೆ ಪ್ರತ್ಯಾಖ್ಯಾನ ಹೂಡಿದ ಪೋಲಿಸಿನವ,

"ಓಹೋಹೋ ! ಏನೆಂದುಕೊಂಡಿರಿ ? ನಿಮಗೆ ಪರವಾನಗಿ ಮೇಲೆ ಬಿಟ್ಟಿದಾರೆ ಎಂದು ತಿಳಿದುಕೊಂಡಿರೇನು ? 'ಪಾಪ' ಅಂತ ದಯೆದೋರಿದ್ದಾರೆ. ಪರವಾನಗಿ ದೊರೆಯಬೇಕಾದರೆ ಎಷ್ಟೆಷ್ಟು ಕಾಯಬೇಕು ಗೊತ್ತೆ ? ಹೂಂ, ಹೊತ್ತಾಯಿತು ಹೊರಡಿ !"

ಯಜಮಾನ ಶೋಕವ್ಯಾಕುಲ ದೃಷ್ಟಿಯಿಂದ ಮಗನ ಕಡೆ ನೋಡಿದ.

* * * *

ಗಗನ ಸರೋವರದಲ್ಲಿ ಸಂಧ್ಯಾಪದ್ಮಿನಿ ಅರಳಿತು.

ಬೆಳ್ಮುಗಿಲ ಮಾಲೆಗಳಿಗೆ ರಂಗೊರೆದ ಹೊಂಗಾಳಿಯ ಹರವು.

ಕೊಲೆಗಡುಕ ನಾಲ್ವರನ್ನು ಸಂಧ್ಯಾವಿಹಾರಕ್ಕಾಗಿ ಅಂಗಳಕ್ಕೆ ಬಿಡಲಾಗಿತ್ತು, ಪೋಲೀಸರ ಕೋವಿಗಳ ಪಹರೆಯಲ್ಲಿ. ಮಾಧು ಹೊರಬರಲು ಒಪ್ಪದಿದ್ದುದರಿಂದ ಒಳಗಡೆ ಉಳಿದಿದ್ದ. ಅವರು ಅಡ್ಡಾಡುತಿದ್ದುದು ಕಿಟಕಿಯ ಮೂಲಕ ದೃಷ್ಟಿಗೆ ಬೀಳುತ್ತದೆ. ಅವರು ಅಲ್ಲಲ್ಲಿ ಸುತ್ತಾಡುತ್ತ ತಮ್ಮತಮ್ಮೊಳಗೆ ವಿಚಾರವಿನಿಮಯ ಮಾಡಿಕೊಳ್ಳುತಿದ್ದರು. ಪರಸ್ಪರ ಭೇಟಿಯಿಂದ ತುಟಿಗಳಲ್ಲಿ ಮ್ಲಾನ ನಗೆ ಕಂಡೂ ಕಾಣದಂತೆ ಮಿನುಗಿ ಮಾಯವಾಗುವುದನ್ನು ಗಮನಿಸಿದ ಮಾಧು. ಅವರೂ ತನ್ನಂತೆಯೇ ಮೃತ್ಯುವಿನ ಪದಧ್ವನಿಯನ್ನು ಆಲೈಸುತ್ತ ಕಾಲಹರಣ ಮಾಡುವುದರಿಂದ ಸಂಧ್ಯಾವಿಹಾರ ಕಿಂಚಿತ್ ಸುಖವೇ.....ನನಗಾದರೋ ಹೊರಹೋಗಲು ಮನಸ್ಸೇ ಆಗುವುದಿಲ್ಲ.....ಎಂದುಕೊಳ್ಳುತ್ತಿರುವಾಗಲೇ ಒಬ್ಬ ಕೊಲೆಗಾರ ಕಿಟಕಿ ಬದಿಗೆ ಬಂದು ಒತ್ತಾಯಪೂರ್ವಕವಾಗಿ ಅಂದ,

"ಯಾಕಯ್ಯಾ ಅಲ್ಲೇ ಇದ್ದು ಕೊರಗುತ್ತಿ ? ಹೊರಗೆ ಬಾ. ಒಂದಿಷ್ಟು ಗಾಳಿ ಬೆಳಕು ಬೀಳಲಿ ಮೈಗೆ. ಏನೇ ಬರಲಿ, ಹೆದರಿಕೊಳ್ಳಬಾರದು."

"ಹೆದರಿಕೊಳ್ಳಲಿಲ್ಲ! ಬೇಜಾರು ಅಷ್ಟೆ."

"ಬೇಸರ ಮೊದಲ ಹೆಜ್ಜೆ ; ಹೆದರಿಕೆ ಎರಡನೆ ಹೆಜ್ಜೆ. ಹೀಗಾದರೆ ಅವಧಿಗಿಂತ ಮೊದಲೇ ನಿನ್ನ ಕತೆ ಮುಗಿದುಹೋಗುತ್ತೆ !"

"ಹೋದರೆ ಹೋಗಲಿ ಬಿಡು ; ವ್ಯಥೆಯಿಲ್ಲ."

"ಸರಿ ಮತ್ತೆ; ಒಳಗೆ ಕುಳಿತುಕೊಂಡೇನು ಮಾಡುತ್ತಿ? ಹೊರಗೆ ಬಾ!"

ಅವನ ದಿಟ್ಟತನವನ್ನು ನೋಡಿ ಲಜ್ಜೆಯಾಯಿತೇನೋ....ವಿಷಣ್ಣ ಭಾವದಿಂದ ಹೊರಬಿದ್ದ ಮಾಧು. ಸಂಧ್ಯಾರಾಗದ ಮಂಗಳಧಾರೆ ಮೈ ಮನಗಳನ್ನು ಆವರಿಸಿದಾಗಲೇ ಎಲ್ಲರ ದೃಷ್ಟಿಯೂ ಇತ್ತಲೇ ಕೇಂದ್ರೀಕೃತ ವಾಯಿತು. ಪೋಲೀಸರು ಗುಸುಗುಸು ಮಾತಾಡಿ ನಗುತಿದ್ದಾರೆ.

ಮೊದಲು ಮಾತಾಡಿಸಿದ ಖೈದಿ ಬಹು ಕಾಲದ ಪರಿಚಯಸ್ಥನಂತೆ ನುಡಿದ,

"ಸಾಯಂಕಾಲ ಹೊರಗಡೆ ಬರುವ ಅವಕಾಶವನ್ನು ಕಳೆದುಕೊಳ್ಳ ಬೇಡ. ಈ ಕೊನೆಗಾಲದಲ್ಲಿ ನಮಗಿರುವ ಅವಕಾಶವನ್ನೆಲ್ಲ ಉಪಭೋಗಿಸದೆ ಅಳುತ್ತ ಕೂಡುವುದಕ್ಕೆ ನೀನೇನು ಹೆಂಗಸೆ ?"

ಆ ಪ್ರಶ್ನೆ ಎದ್ದಾಗ ನಾನು ಹೆಂಗಸಾಗಿ ಹುಟ್ಟಿದ್ದಿದ್ದರೆ ಈ ಘನಘೋರ ಪಾಪಕ್ಕೆ ಒಳಗಾಗುತ್ತಿರಲಿಲ್ಲವೇನೋ ಎಂಬ ಯೋಚನೆಯೂ ಮೂಡಿತು. ಚಿಂತಿತ ಮನಸ್ಕನಾಗಿ ಏನೊಂದೂ ಹೇಳದೆ ಅಂಗಳದ ಬದಿಗೆ ಹೋದ. ನಾಲ್ಕೂನಿಟ್ಟಿಗೆ ಎತ್ತರವಾದ ಕಲ್ಲುಗೋಡೆಯಿದ್ದುದರಿಂದ ಯಾರೂ ಅಲ್ಲಿಂದ ತಪ್ಪಿಸಿಕೊಳ್ಳುವುದು ಅಸಾಧ್ಯ. ಬಲಭಾಗದ ಗೋಡೆಯಾಚೆ ಸ್ತ್ರೀ ಕಂಠಗಳೇ ಮೊಳಗುತಿದ್ದುದುದನ್ನು ಗಮನಿಸಿ ಪೋಲೀಸಿನವನನ್ನು ಕೇಳಿದ ಮಾಧು,

"ಆ ಕಡೆ ಬರೀ ಹೆಂಗಸರ ದನಿಯೇ ಕೇಳಿಬರುತ್ತಿದೆ, ಏನು ಸಮಾಚಾರ ?"

"ಅದು ಸ್ತ್ರೀ ಖೈದಿಗಳ ವಿಭಾಗ."

"ಎಷ್ಟು ಮಂದಿ ಇದ್ದಾರೆ ?"

"ಓ, ಅದಕ್ಕೇನು ಲೆಕ್ಕವಿಲ್ಲ ನೂರಾರು ಮಂದಿ ಇದ್ದಾರೆ."

ವಿಷಯ ಎದೆಯಾಳಕ್ಕೆ ಜರ್ರನೆ ಇಳಿಯಿತು.

"ಅದರಾಚೆಯ ವಾರ್ಡ್ ಮತ್ತು ಹಿಂಭಾಗದ ತಾಣವೆಲ್ಲಾ ಗಂಡಸರದು. ಈ ಜೈಲು ಸಾವಿರಕ್ಕೂ ಮಿಕ್ಕಿ ಮಿಾರಿ ಹಿಡಿಯುತ್ತದೆ. ಇಲ್ಲಿ ಯಾವಾಗಲೂ ಭರ್ತಿಯೇ."

ಕೇಳಲಾರದೆ ಕೇಳಿದುವು ಕಿವಿಗಳು. ಮಾಧು ಅಲ್ಲಿಂದ ದಾಸವಾಳದ ಗಿಡದ ಕಡೆಗೆ ಹೋದ. ಅದರ ತುಂಬೆಲ್ಲಾ ಕೆಂಪು ಹೂಗಳು. ಸುವಾಸನೆ ಇಲ್ಲದಿದ್ದರೂ ಸುಂದರವಾದ ಸುಮಸಮುಚ್ಚಯ. ಸ್ವಲ್ಪ ಹೊತ್ತು ಅವುಗಳ

ಅವಲೋಕನದಲ್ಲಿಯೇ ಇದ್ದನೇನೋ....ಅಷ್ಟರಲ್ಲಿ ಹಿರಿಯ ಪೋಲೀಸ್ ಜೈ
ಗಳಿಗೆ ಒಳಹೋಗಲು ಅಪ್ಪಣೆ ಮಾಡಿದ. ಹದಿನೈದು ನಿಮಿಷಗಳ ಪದಪ
ಭ್ರಮಣ ಮುಗಿಯಿತು. ಎಲ್ಲರೂ ಅವರವರ ಕೋಣೆಗಳನ್ನು ಹೊಕ್ಕರು
ವಾಚ್‌ಮ್ಯಾನ್ ಬೀಗ ಹಾಕಿದ.

ಸಾಲಾಗಿನ ಕೊಠಡಿಗಳಲ್ಲಿ ವಿದ್ಯುದ್ದೀಪಗಳು ಭುಗ್ಗನೆ ಹೊತ್ತಿ
ಕೊಂಡುವು.

* * *

ಢಣ್, ಢಣ್, ಢಣ್, ಢಣ್. ಢಣ್, ಢಣ್.

ಶ್ರವಣೇಂದ್ರಿಯ ಬಿರಿಯುವಂತೆ ಆ ಘಂಟಾಘೋಷ ಕೇಳಿಬರುತ್ತಲೇ ಇತ್ತು, ಕರ್ತವ್ಯ-ನಿಷ್ಠೆ-ಸತ್ಯ-ಧರ್ಮಗಳ ಪವಿತ್ರಾಚರಣೆಯನ್ನು ಸಾರಿ ಹೇಳುವಂತೆ !

ಉಂಡು ಮುಗಿಸಿದ್ದ ಖೈದಿಗಳು ಸಮವಸ್ತ್ರಭೂಷಿತರಾಗಿ ಕೋವಿ ಧಾರಿಗಳ ಕಾವಲಿನಲ್ಲಿ ವ್ಯಾನು ಹತ್ತುವ ವಿಕಟ ಕರುಣಾಜನಕ ದೃಶ್ಯ ದೃಷ್ಟಿಗೆ ಬಿತ್ತು. ತಂಡ ತಂಡವಾಗಿ ಹೊರಟರು ಖೈದಿಗಳು. ಮಾಧು ಅವರನ್ನು ನೋಡುತ್ತ ನಿಟ್ಟುಸಿರು ಬಿಟ್ಟು ನಮ್ಮನ್ನೂ ಅಂತಹ ಕೆಲಸಗಳಿಗೆ ಕರೆ ದೊಯ್ದಿದ್ದರೆ ಕೆಲಸ ಮಾಡಬಹುದಿತ್ತು. ಇಲ್ಲಿ ಕೂತು ನಿಂತು ಹೊತ್ತು ಕಳೆಯುವ ಗೋಳು ಯಾರಿಗೆ ಬೇಕು? ಒರಟು ನೆಲ ಕುಳಿತರೂ ಒತ್ತುತ್ತೆ ; ಮಲಗಿದರೂ ಒತ್ತುತ್ತೆ.

ಆದರೇನು ? ಅನುಭವಿಸಲೇಬೇಕು.

ಕೊಲೆಗಡುಕ....!

ಕೊಲೆಗಾರನಿಗೆ ಯಾರು ತಾನೇ ಸುಪ್ಪತ್ತಿಗೆ ಕೊಟ್ಟಾರು? ಹೋಗಲಿ, ಜೈಲಿನ ಒಳಗಡೆಯೇ ನಮ್ಮನ್ನು ಕೆಲಸಕ್ಕೆ ನಿಯಮಿಸಿದ್ದರೆ ಹೊತ್ತು ಸರಾಗ ವಾಗಿ ಕಳೆಯಬಹುದಿತ್ತು. ಕೊಲೆಗಾರರೆಂದು ನಮ್ಮನ್ನು ನಂಬುವುದೇ ಇಲ್ಲವಲ್ಲಾ ? ಯಾವುದೋ ಒಂದು ವಿಷಗಳಿಗೆಯಲ್ಲಿ ಉದ್ರೇಕಗೊಂಡು ಹದ್ದುಮೀರಿ ವರ್ತಿಸಿದರೆ ಸದಾಕಾಲವೂ ಅಂತಾಗುವುದು ಸಾಧ್ಯವೇ ? ಕೊಲೆಗಾರರನ್ನು ಆತ್ಮೀಯತೆಯಿಂದ ಕಂಡು ಮಾನವರನ್ನಾಗಿ ಮಾಡುವ ಉದ್ದೇಶವೇ ಉತ್ತಮ ಉದ್ದೇಶ. ಭಯಂಕರ ಪ್ರತಿಕ್ರಿಯೆ ತೋರಿ ಗಲ್ಲುಗಂಭಕ್ಕೆ ಬಿಗಿದರೆ ಏನು ಸಾಧಿಸಿದ ಹಾಗಾಯ್ತು ?

ಒಡನೆ ಎದೆಯಾಳದಿಂದ ನಿಟ್ಟುಸಿರೊಂದು ಹೊರಹೊಮ್ಮಿತು.

ಪಟ, ಪಟ, ಪಟ, ಪಟ.

ಆ ಪಟಿತ್ಕಾರ ಮೂಡಿದೆಡೆಗೆ ದೃಷ್ಟಿ ಸಹಜವಾಗಿ ಹೊರಳಿತು. ನಸು ದೂರದಲ್ಲಿ ಮೊಳಗುತ್ತಿದ್ದ ಅವು ಒಂದೆರಡು ಗಳಿಗೆಯೊಳಗಾಗಿ ಸಮೀಪಿಸಿದುವು. ಬಾಗಿಲ ಬಳಿ ಬಂದು ನಿಂತ ಪೋಲೀಸಿನವ ಸ್ವಲ್ಪ ತಗ್ಗಿದ ದನಿಯಲ್ಲಿ "ಏಳು ! ಏಳು ! ವಾರ್ಡನ್ ಬರುತಿದ್ದಾರೆ !" ಎಂದು ಸೂಚನೆ ಕೊಟ್ಟ.

ಅದೇ ರೀತಿ ಸಾಲಾಗಿನ ಕೊಠಡಿಯಲ್ಲಿದ್ದ ಎಲ್ಲಾ ಕೊಲೆಗಾರರಿಗೂ ಅಪ್ಪಣೆ ಮಾಡಿದ್ದು ಗೊತ್ತಾಯಿತು. ಮಾಧು ಎದ್ದು ಕಟಕಟಿಯ ಬಾಗಿಲ ಬಳಿ ವಾರ್ಡನ್-ಗಾಗಿ ಕಾದು ನಿಂತ. ಆತ ಏನಾದರೂ ಸಹಾಯ ಮಾಡಿಯಾನೇನೋ ಎಂಬ ಆಶಾಭಾವನೆ ಮನದಲ್ಲಿ.

ಆದರೆ.....!

ಈ ಪ್ರಪಂಚ ಅಷ್ಟೊಂದು ವಿಶ್ವಸ್ತಭಾವನೆಯಿಂದ ಕೂಡುವುದು ಇನ್ನೆಂದಿಗೋ..........

ಕೆಲವೇ ಗಳಿಗೆಗಳಲ್ಲಿ ವಾರ್ಡನ್ ಎದುರಾದ. ಕೊಲೆಗಡುಕರ ಎಂಟು ಕೊಠಡಿಗಳಿಗೂ ಹೊಂದಿಕೊಂಡೇ ಹರಿದಿರುವ ಜಗಲಿಯಲ್ಲೇ ಅವನು ಹಾಯ್ದು ಬಂದಿದ್ದ. ನಾಳೆಯೋ, ನಾಡಿದ್ದೋ ಒಬ್ಬನಿಗೆ ಗಲ್ಲಾಗಲಿದೆ. ಈ ಜಗಲಿಯನ್ನೇ ಹಿಡಿದು ಹೊರಟರೆ ಗಲ್ಲುಗಂಬ ಇರುವ ತಾಣದವರೆಗೂ ಹರಿಯುತ್ತೆ ಹಾದಿ. ಬಹುಶಃ ಗಲ್ಲುಗಂಬದ ಪರೀಕ್ಷೆಗೆ ಬಂದನೇನೋ ವಾರ್ಡನ್. ಅವನು ಈಯೆಡೆಯಲ್ಲಿ ಕಾಣಿಸಿಕೊಳ್ಳುವುದು ಸ್ವಲ್ಪ ಅಪರೂಪವೇ. ಬಹುಶಃ ಅದಕ್ಕೇ ಇರಬೇಕು.....ಯೋಚನೆ ಅಲ್ಲಿಗೆ ಬಂದು ನಿಂತಾಗಲೇ ವಾರ್ಡನ್ ಎದುರಾದ.

"ಏನಪ್ಪಾ, ಬಹಳ ಸಪ್ಪೆಯಾಗಿದ್ದಿ ? ನೀನು ಸರಿಯಾಗಿ ಊಟ ಮಾಡುತ್ತಿಲ್ಲವಂತೆ ?.....ಏಕೆ ?"

"ಇಲ್ಲ ಸ್ವಾಮಿ ! ಸರಿಯಾಗಿ ಊಟ ಮಾಡುತ್ತಿರುವೆ."

ಪಕ್ಕದಲ್ಲಿ ನಿಂತ ಪೋಲೀಸಿನವ ನಡುವೆ ಬಾಯಿ ಹಾಕಿದ.

"ಬಹಳ ಕಡಿಮೆ ತಿನ್ನುತ್ತಾನೆ. ತಟ್ಟೆಯಲ್ಲಿ ಅರ್ಧ ಊಟ ಹಾಗೇ ಇರುತ್ತೆ."

"ಹಾಗೆ ಮಾಡಬಾರದಪ್ಪಾ! ಯಾವ ಕಾರಣಕ್ಕಾಗಿ ಊಟ ಮಾ
ತ್ತಿಲ್ಲ? ಇಲ್ಲಿಯ ಊಟ ರುಚಿಸುತ್ತಿಲ್ಲವೆ? ನಿನಗೆ ಯಾವ ಬಗೆಯ ಊ
ರುಚಿಸುತ್ತದೆ, ಅದಾದರೂ ಹೇಳು."

ಮಾಧು ಮಾತಾಡಲಿಲ್ಲ. ಲಜ್ಜೆ-ದುಃಖಗಳ ಒತ್ತಡದಿಂದ ಮುಖಬ
ಚಂದನಪೂರೆದಂತೆ ರಂಗು ತಳೆಯಿತು.

"ಜೈಲಿನಲ್ಲಿ ಕೆಲವು ನಿಯಮಗಳಿವೆ. ಅಳುವುದು-ಉಪವಾಸವಿ
ವುದು ನಿಶಿದ್ಧ. ಅದಕ್ಕನುಸಾರವಾಗಿ ಖೈದಿಗಳು ನಡೆದುಕೊಳ್ಳಬೇಕ
ನಿಯಮ ತಪ್ಪಬಾರದು. ನೀನಿನ್ನೂ ಯುವಕ. ಗಂಡಾಗಿ ಹುಟ್ಟಿ ಹೆಣ್ಣ
ಬಾಳಬಾರದು. ವಿಧಿ ನಿಯಮಕ್ಕೆ ಯಾರು ಹೊಣೆ?"

ಮಾಧು ಹೇಳಲಾರದೇ ಹೇಳಿದ "ಎಲ್ಲಾ ನನ್ನ ಗ್ರಹಚಾರ ಸ್ವಾಮಿ.

"ದಿನವೂ ಹೊರಬರುತ್ತಿಲ್ಲವಂತೆ. ಹಾಗೆಲ್ಲಾ ಹಟಮಾಡುವುದು ತಪ್ಪ
ಇದ್ದಷ್ಟು ದಿನ ಧೈರ್ಯ-ಸಂತೋಷಗಳಿಂದ ಕಾಲ ಕಳೆಯಬೇಕು. ಯಾರ
ಆಗಲಿ, ಕೊನೆಯ ದಿನಗಳಲ್ಲಿ ನಗುನಗುತ್ತ ಇದ್ದರಲ್ಲವೇ ಮುಂದಿನ ಜನ್ಮದಲ್ಲ
ಉತ್ತಮ ಗುಣಗಳನ್ನು ಪಡೆಯಲು ಸಹಾಯ? ಇನ್ನು ದುಃಖಿಸಿ ಏನ
ಪ್ರಯೋಜನ? ದೇವರಲ್ಲಿ ಮನವಿಟ್ಟು ಧ್ಯಾನ ಮಾಡು. ಅವನು ನಿನಗ
ಸದ್ಗತಿ ಕೊಡುತ್ತಾನೆ."

ಆ ದೇವರ ವಿಚಾರ ಕಿವಿಗೆ ಬೀಳುತಿದ್ದಂತೆ ಅಲ್ಲಿಂದ ಓಡಿ ಹೋಗು
ವಷ್ಟು ಜುಗುಪ್ಸೆ ನೊಂದ ಮನಸ್ಸಿಗೆ. ಅವನಿರುವುದು ಸತ್ಯವಾಗಿದ್ದಿದ್ದರೆ
ಜಗತ್ತು ಪಾಪ ಕರ್ಮಗಳಲ್ಲಿ ತೊಡಗುತ್ತಿರಲಿಲ್ಲವೇನೋ.....

ವಾರ್ಡನ್ ಕಾರುಣ್ಯಪೂರ್ಣ ದನಿಯಲ್ಲಿ ನುಡಿದ,

"ಎದೆಗೆಡಬೇಡ..... ಇರುವಷ್ಟು ಕಾಲ ಸುಖವಾಗಿರಬೇಕು."

ಮಾಧು ಮಾತಾಡದೆ ಕಣ್ಣುಗಳನ್ನು ತೀಡಿಕೊಂಡ. ವಾರ್ಡನ್
ಮುಂದಿನ ವಾರ್ಡ್ ಕಡೆ ನಡೆದ. ಪೋಲೀಸಿನವ ಹಿಂಬಾಲಿಸಿದ.

* * * *

ಅಂದು ಕೆಲಸಕ್ಕೆ ಬಿಡುವು. ಒಳ ಆವರಣದಲ್ಲಿದ್ದ ಖೈದಿಗಳನ್ನು
ಅಂಗಳಕ್ಕೆ ಬಿಟ್ಟ ಪೋಲೀಸಿನವ, ನಾಲ್ಕಾರು ಮಂದಿ ಕೋವಿ ಸಹಿತ
ಪೋಲೀಸ್ ಕಾವಲುಗಾರರ ಕಾವಲಿನಲ್ಲಿ.

ಅಷ್ಟೊಂದು ಮಂದಿ ಹೆಮ್ಮರದಡಿ ಕೂಡಿದಾಗ ರಕ್ತದ ಪ್ರತಿ ಕಣವೂ ತುಳುಕುವಷ್ಟು ಹುರುಪು. ಮಾಧು ಕಿಟಕಿಯಲ್ಲಿ ನೋಡುತ್ತ ಎರಡೂ ಕೈಗಳಿಂದ ಸರಳುಗಳನ್ನು ಹಿಡಿದುಕೊಂಡು ನಿಂತ. ಅವರಲ್ಲಿ ಅನೇಕರು ಉತ್ತಮ ಮಾತುಗಾರರು; ಅವರಿಂದ ಭಾಷಣ ಮಾಲೆಯನ್ನು ಪೋಲೀಸರು ಏರ್ಪಡಿಸಿದರು. ಮೊದಲು ಒಬ್ಬ ಹರಿಕಥಾ ಕಾಲಕ್ಷೇಪ ಮಾಡಿದ. ಕೆಲವರು ರವೀಂದ್ರ ಗೀತೆಗಳನ್ನೂ, ಇನ್ನೂ ಕೆಲವರು ಸಿನೆಮಾ ಹಾಡುಗಳನ್ನೂ ಹಾಡಿದರು. ಅನಂತರ ಭಾಷಣ ಮಾಲೆ. ಎರಡು ಗಂಟೆಗಳ ಮನರಂಜನೆ ಮುಗಿಸಿ ಅವರು ನಿರ್ಗಮಿಸಿದ ಮೇಲೆ ಕೊಲೆಗಾರ ಖೈದಿಗಳಿಗೆ ಕರೆ ಬಂತು.

ಎಂಟು ಹತ್ತು ಜನ ಒಮ್ಮೆಗೇ ಹೊರಬಿದ್ದರು. ಅನಂತರ ಮೆಲ್ಲ ಮೆಲ್ಲನೆ ಮಾಧು ಆಯಾಸಗೊಂಡವನಂತೆ ಹೊರಬಿದ್ದ. ಶರೀರ ಜಡಭರಿತ ವಾಗಿದ್ದಂತೆ ಅತ್ಯಂತ ಭಾರಾಕ್ರಾಂತವಾಗಿತ್ತು. ಓದಬಲ್ಲ ಖೈದಿಯೊಬ್ಬನಿಗೆ ಗಾಂಧೀಜಿಯ ಆತ್ಮಕತೆಯನ್ನು ಕೊಟ್ಟು ಓದಿ ಹೇಳಲು ಸೂಚಿಸಿದ ಪೋಲೀಸ್. ಅವನು ಅಷ್ಟೊಂದು ಪರಿಣಿತನಿರದೆ ಸಾಮಾನ್ಯ ರೀತಿಯಲ್ಲಿ ಓದಿ ಹೇಳಿದ. ಅದರಿಂದ ಪ್ರಭಾವಿತಗೊಂಡ ಇನ್ನೊಬ್ಬ "ನಾನು ಅರವಿಂದರ ಚರಿತ್ರೆಯನ್ನು ಓದಿರುವೆ. ಅವರ ವಿಚಾರವಾಗಿ ಕೆಲವು ಮಾತುಗಳನ್ನು ಹೇಳಬಲ್ಲೆ." ಎಂದ.

"ಆಗಬಹುದು, ಆಗಬಹುದು." ಎಂದುವು ಅನೇಕ ದನಿಗಳು.

ಆದರೆ, ಅವನು ಕ್ರಮವಾಗಿ ಮಾತಾಡಲು ಬಾರದ ಹುಂಬ. ಎಲ್ಲಿಂದಲೊ ಆರಂಭಿಸಿ, ಏನೇನೋ ಹೇಳಿ ಮುಗಿಸಿದ. ಕೆಲವರು ನಕ್ಕರು ಕೆಲವರು "ಪೆದ್ದ ಕಣೊ!" ಎಂದರು. ಅವನು ನಗುನಗುತ್ತ ಜಾರಿಕೊಂಡ.

ಮೊದಲಿನ ತಂಡ ಉತ್ಸಾಹಕರವಾಗಿ ಮನರಂಜನೆ ನಡೆಸಿದ್ದರು. ಆದರೆ, ಕೊಲೆಗಡುಕರ ಮೃತ್ಯುಭೀತ ಹೃದಯಗಳಿಂದ ಏನೇನೂ ಸಾಧ್ಯ ವಾಗಲಿಲ್ಲ. ಕಂಪಿತ ಸ್ವರದಲ್ಲಿ ಒಂದೆರಡು ಮಾತಾಡಿದರೂ ಅಲ್ಲಲ್ಲಿ ಅಕಾರಣ ವಾಗಿ ತುಂಡುಗಡಿಯುತಿತ್ತು ಧ್ವನಿ. ಚಿದಾಕಾಶದ ಕಾರ್ಮೋಡಗಳಿಂದ ಜೀವಗಳು ಸೋತು ಹೋಗುತಿದ್ದುವು. ಒಬ್ಬ ಹಾಡುವೆನೆಂದು ಸಿನೆಮಾ ಹಾಡುಗಳನ್ನು ಗುನುಗುನಿಸಿದ. ಅದೂ ಸಹ ಕ್ರಮವತ್ತಾಗಿ ಬರಲಿಲ್ಲ. ಅವನೂ ಅಷ್ಟಕ್ಕೇ ಸುಮ್ಮನಾದ.

ಮಾಧು ನೇರವಾಗಿ ದಾಸವಾಳದ ಗಿಡದ ಬಳಿಗೆ ಹೋದ. ಹಿಂ
ದಿನದ ಹೂಗಳು ಮುಜುಗಿ ಹೊಸ ಹೂವುಗಳು ಅರಳಿದ್ದುವು. ರ
ಎಸಳುಗಳ ಮೇಲೆ ಮೃದುವಾಗಿ ಬೆರಳಾಡಿಸಿದ. ಆ ಜೇಲಿನ ವಿಚಿ
ವಾತಾವರಣದಲ್ಲಿ ನವೋದಿತ ವಸಂತ ಶ್ರೀಯಂತೆ ಅರಳಿದ ಪುಷ್ಪಕೋ
ಜ್ಯಾನಿಫೋರ್‍ಸಕ್ಕೆ ಅಪರಿಚಿತವೋ ಎಂಬಷ್ಟು ಸುಪುಷ್ಟ.... ಅವನ
ಕಣ್ತುಂಬ ನೋಡುತಿದ್ದರೆ ಏನೋ ಒಂದು ಬಗೆಯು, ಊಹಿಸಿದರ
ಏನೇನೂ ಅರ್ಥವಾಗದ ವಿಶ್ವಸ್ತಭಾವ ಮನದಲ್ಲಿ.

"ಏ! ಹುಂಬ!"

"ಹೂವನ್ನೆ ಏನು ನೋಡುತಿದ್ದೀಯೋ?"

ಆ ಮಾತು ಕೇಳಿ ಮಾಧು ಹಿಂತಿರುಗಿ ನೋಡಿದ.

"ನಮ್ಮ ಕೂಟಕ್ಕೆ ಕೂಡಿದ್ದರೆ ಒಂದೆರಡು ಮಾತಾದರೂ ಆಡಬಹ
ದಿತ್ತು. ಒಬ್ಬನೇ ಒಂದೆಡೆ ಹೇಗಿರುತ್ತಿ?" ಅದೇ ಧ್ವನಿ ಪುನಃ ಮೊಳಗಿತು

"ನನಗಿದೇ ಇಷ್ಟ. ಸುಮ್ಮನಿರಯ್ಯಾ" ಎಂದ ಮಾಧು.

ಆ ಮಾತಾಳಿ ಮನುಷ್ಯ ಅಷ್ಟಕ್ಕೆ ಸುಮ್ಮನಾಗಲಿಲ್ಲ; ಕೊಂಕು ನಗ
ಬೀರಿ ನುಡಿದ "ಎಲ್ಲೋ ಕೇಡಿ ಜನ್ಮ! ಇಲ್ಲಿ ಬಂದು ಸಿಕ್ಕಿಕೊಂಡಿದೆ!
ಧೈರ್ಯ ಇಲ್ಲದವ ಕೊಲೆಗೈದುದೇಕೆ?"

ಹಿಹ್ಹಿಹ್ಹೀೀೀ!

ಪರಿಸರವೆಲ್ಲಾ ನಗೆಯಲ್ಲಿ ಪಾಲ್ಗೊಂಡಿತು.

ಮಾಧು ನಿಟ್ಟುಸಿರು ಬಿಟ್ಟು ಕದಲದೆ ನಿಂತ. ಹಿಂದಿರುಗಿ ನೋಡುವ
ಸಾಹಸ ಮಾಡಲಾಗಲಿಲ್ಲ. ಅವನನ್ನು ನೋಡುತ್ತ ಇನ್ನೊಬ್ಬ ಖೈದಿ ಅಂದ.

"ಬಿಡು, ಅವನ ಮನಸ್ಸಿನ್ನೂ ಸ್ಥಿಮಿತಕ್ಕೆ ಬಂದಿಲ್ಲ. ನೀನು ಮತ್ತೇಕೆ
ಕಾಡುತ್ತಿ?"

ಅದೇ ವೇಳೆಗೆ ಪೋಲೀಸಿನವ ಕೈಗಡಿಯಾರದ ಕಡೆ ನೋಟ
ಹೊರಳಿಸಿ ಎಲ್ಲರಿಗೂ ಒಳಹೋಗಲು ಅಪ್ಪಣೆ ಕೊಟ್ಟ.

ಎಲ್ಲರೂ ಅವರವರ ಕೋಣೆಯ ಕಡೆ ಹೊರಟರು. ಮಾಧು
ಹಿಂಬಾಲಿಸಿದ.

* * *

ಓಲೆಭಾಗ್ಯ ಬೇಡಿ ಬರೆದುಕೊಂಡಿದ್ದ ಅರ್ಜಿ ರಾಜ್ಯಪಾಲರಿಂದ ತಿರಸ್ಕೃತವಾಯಿತೆಂದು ರಾಷ್ಟ್ರಾಧ್ಯಕ್ಷರಿಗೂ ಪ್ರಧಾನಿಯವರಿಗೂ ಬರೆದು ಕೊಳ್ಳಲು ನಾಲ್ಕಕ್ಷರ ಕಲಿತವರಾರೋ ಉದಾರ ಹೃದಯದಿಂದ ಸಹಾಯ ಮಾಡಿದ್ದರು. ಅರ್ಜಿಗಳ ಪರಿಶೀಲನೆಯಲ್ಲಿ-ಪತ್ರ ವ್ಯವಹಾರಗಳ ಅವಧಿ ಯಲ್ಲಿ ಹೆಚ್ಚು ಕಡಿಮೆ ವರ್ಷಮಾನವೊಂದು ಉರುಳಿ ಹೋಯಿತೇನೋ..... ಅಂತೂ, ಮತ್ತೊಂದು ವರ್ಷ ಜೀವದಾನವೊದಗಿತು. ಆ ಅವಧಿಯಲ್ಲಿ ಇಬ್ಬರು ನೇಣುಗಂಬ ಏರಿದ್ದರು. ಒಬ್ಬನಿಗೆ ಜೀವಾವಧಿಗೆ ಇಳಿಸಿ ಬೇರೆಡೆಗೆ ಕಳುಹಿಸಿದ್ದರು. ಉಳಿದವರು ತನ್ನಂತೆಯೇ 'ಓಲೆಭಾಗ್ಯ'ದ ಬೇಡಿಕೆಯ ಮೇಲೆ ಮೃತ್ಯುವಿನ ಪದಧ್ವನಿಯನ್ನು ಆಲೈಸುತ್ತ ಕೊಳೆಯುತಿದ್ದರು. ಆರ್ತ ಹೃದಯಗಳ ಮೊರೆ ವರ್ಷಾನುವರ್ಷಗಳಿಂದ ಅದಾವ ದೇವತೆಯನ್ನು ಮುಟ್ಟಿದ್ದಿತೋ..... ಆದರೇನು ? ಯಾವ ದೇವತೆಯೂ, ಯಾವತ್ತೂ ಉತ್ತರಿಸುವ ತೊಂದರೆ ತೆಗೆದುಕೊಳ್ಳದಿದ್ದುದರಿಂದ ಪಂಜರಬದ್ಧ ಮೃಗಶಾ ಬಕದಂತೆ ಆರ್ತ ಹೃದಯರಾಗಿಯೇ ಉಳಿದಿದ್ದರು.

ಮಾಧು ಈಗೀಗ ಎಲ್ಲರೊಡನೆ ಬೆರೆಯುತಿದ್ದ. ಒಬ್ಬನೇ ಇದ್ದ ಬೇಸರವನ್ನೆಲ್ಲಾ ಸಂಜೆಯಲ್ಲಿ ಮತ್ತಿತರ ಅಪರಾಧಿಗಳೊಂದಿಗೆ ಕಲೆತು ಮಾತುಕತೆ ಬೆಳೆಸುತಿದ್ದ. ಕಳೆದ ಮೂರು ವರ್ಷಗಳ ಬಂಧಿತ ಜೀವನದ ಅನುಭವದಿಂದ ಜೀವಾವಧಿ ಶಿಕ್ಷೆಗಿಂತ ಗಲ್ಲು ಶಿಕ್ಷೆಯೇ ಲೇಸು ಎಂಬ ಯೋಚನೆಗೆ ಶರಣಾಗಿದ್ದ. ದುಃಖಭರಿತ ಚಿತ್ತ ಒಮ್ಮೊಮ್ಮೆ ಕೆರಳಿ ಹಗ್ಗ ಕಿತ್ತ ಗೂಳಿಯಂತಾಗಿ, ಕಂಡ ಕಂಡವರನ್ನೆಲ್ಲಾ ಚಚ್ಚಿ ಸಾಯಿಸಿಬಿಡಲೇ ಎಂಬಷ್ಟು ಮದೋನ್ಮತ್ತೆ ಭುಗಿಲೇಳುವುದು. ಅನಂತರ ಸಪ್ಪೆ, ಬರೀ ಸಪ್ಪೆ. ಏಕಾಂತ ವಿಚಾರಪರತೆಯಲ್ಲಿ ತಾನೇ ತಾನಾಗಿ ತನ್ನನ್ನು ಹತೋಟಿಗೆ ತೆಗೆದುಕೊಳ್ಳುವ.

ಜೇಲಿನ ಗೋಡೆಯಾಚೆ ದೂರದ ಮರವೊಂದು ಸಿಂಗರಿಸಿದಂತೆ ಹೂವಾಗಿತ್ತು. ಗಾಳಿ ಅತ್ತಿಂದಿತ್ತ ಬೀಸಿದಾಗ ಪುಷ್ಪರೇಣು ಪುಷ್ಪದಳ ಜೇಲಿನ ಆವರಣದಲ್ಲೂ ಬಂದು ಬೀಳುತಿದ್ದುವು. ಸುಗಂಧಯುಕ್ತ ಹೂಗಳ ಹೇರಾಶಿಯ ತುಂಬೆಲ್ಲಾ ಝೇಂಕರಿಸುತ್ತ ಮುತ್ತುವ ಉನ್ಮತ್ತ ಭ್ರಮರಗಳ ಪರಿಭ್ರಮಣ. ಬೆಳಗಿನ ಝಾವದಿಂದಲೇ ಆರಂಭಿಸುವ ಅವುಗಳ ಕರ್ಮ

ಯೋಗ-ಜೀವನ ತತ್ಪರತೆ-ಬಂಧುತ್ವ ಇವುಗಳು ಅತ್ಯಂತ ಶಾಂತಿಸಂಭ್ರಮಗ ಸಂವಿಧಾನದಲ್ಲಿ ನಡೆಯುವುದನ್ನು ನೋಡಿದರೆ ಮನುಷ್ಯವರ್ಗ ಹೀಗೇಕೆ ಎನಿಸುತ್ತೆ.

ಮನುಷ್ಯ ಜನ್ಮ ಶ್ರೇಷ್ಠ ಎನ್ನುತ್ತವೆ ವೇದ ವೇದಾಂಗಗಳು.

ಆದರೆ.....?

ಆ ಪ್ರಶ್ನೆ ಎದ್ದೊಡನೆಯೇ ದೇಹದಾದ್ಯಂತ ನಸುಕಂಪನದ ಅಲೆ ಹ ದಾಡಿ ಹೋಯಿತು. ಸುಮ್ಮನೆ ಮರವಟ್ಟಂತೆ ಕಬ್ಬಿಣದ ಸರಳುಗಳನ್ನು ಹಿಡಿದುಕೊಂಡು ಮೈಯಾಂತು ನಿಂತ. ದೃಷ್ಟಿ ದಾಸವಾಳದ ಗಿಡದ ಕಡ ಹರಿಯಿತು. ಸಾಕಷ್ಟು ಅರಳು ಮೊಗ್ಗುಗಳು ಪಾಣಿ ಪಲ್ಲವಗಳಲ್ಲಿ ನಳನಳ ಸಿವೆ. ಒಂದು ಕಾಲದಲ್ಲಿ ಇಂತಹ ಮೊಗ್ಗಾಗಿಯೇ ಮೂಡಿದ್ದ ಮಾಣಿಕ್ಯ ಜೀವನ ವೇದಿಯಲ್ಲಿ ನವದೀಪ್ತಿಯನ್ನು ಉರಿಸಿ ಆಸೆ-ಆಕಾಂಕ್ಷೆಗಳ ಮೊಳಕೆ ಯೊಡೆಸಿ ಹಕ್ಕಿಯಂತೆ ಹಾರಿಹೋದುದೇ ಕಾರಣವಿರಬಹುದು, ಪರಿತಪ್ತ ಚಿತ್ತ ವ್ಯಗ್ರವಾಗಲು. ಇಲ್ಲದಿದ್ದಲ್ಲಿ ನಾನಿಷ್ಟು ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ ವೇನೋ.....ಸ್ವಹಸ್ತಗಳಿಂದಲೇ ಜೀವನದ ಯಶಸ್ಸನ್ನು ಕಲಂಕಿತಗೊಳಿಸಿದ್ದು ಧುರ್ವಿಧಿ! ಮಾಣಿಕ್ಯಳನ್ನು ಕಳೆದುಕೊಂಡಾಗಲೇ ನನ್ನ ಪತನ ಸನ್ನಿಹಿತ ವಾಯಿತು. ನಾನಂತೂ ಸಾಯುವೆ.....ಮಡದಿಯ ಗತಿಯೇನು? ಇಳಿ ವಯಸ್ಸಿನ ತಾಯಿ ತಂದೆಯರು ಯಾರನ್ನು ಅವಲಂಬಿಸಬೇಕು?

ಪ್ರಶ್ನೆ ಮನವನ್ನು ಗಾಣಕ್ಕೆ ಕೊಟ್ಟಂತೆ ಹಿಂಡುತ್ತದೆ. ತನ್ನನ್ನು ತಾನೇ ಹಲವು ಬಾರಿ ಶಪಿಸಿಕೊಂಡ-ತಿರಸ್ಕರಿಸಿಕೊಂಡ. ಈ ಮೂರು ವರ್ಷ ಕಾಲ ಮನೆಯಲ್ಲಿದ್ದಿದ್ದರೆ ಜಮೀನನ್ನು ಉಚ್ಛ್ರಾಯ ಸ್ಥಿತಿಗೆ ತರಬಹು ದಾಗಿತ್ತು. ಮುದಿ ಎತ್ತುಗಳನ್ನು ಮಾರಿ ಹೊಸ ಎತ್ತು ಕೊಳ್ಳುವ ಅಗತ್ಯ ವಿತ್ತು. ಮನೆಯ ಒಡೆದು ಹೆಂಚುಗಳನ್ನು ಬದಲಿಸಿರಲಿಲ್ಲ. ಮಾಣಿಕ್ಯಳ ಚಿತ್ರ ಬರೆಸಬೇಕಿತ್ತು. ಅವಳ ಆತ್ಮಶಾಂತಿಗಾಗಿ ಪೂಜೆ ಪುನಸ್ಕಾರ ಮಾಡಿ ಸೋಣ ಎಂದುಕೊಂಡಿದ್ದೆ. ವಿಧಿ ನನ್ನನ್ನು ಈ ಅಂಧಕಾರಕ್ಕೆ ನೂಕಿ ಎಲ್ಲಾ ಕೆಲಸ ಕಾರ್ಯಗಳಿಗೂ ಎಳ್ಳುನೀರು ಬಿಡಿಸಿತು. ವಿಧಿಯ ಅದ್ಭುತ ವಿಕ್ರಮ ಈ ಮನೋರಮ ಜಗತ್ತಿನ ಮೇಲೆ ಒಂದಲ್ಲ ಒಂದು ರೀತಿಯಲ್ಲಿ ನಡೆಯು ವುದು ದಿಟ.

ಆಲೋಚನೆಯಲ್ಲಿ ಮುಳುಗಿ ತೇಲುತಿದ್ದಂತೆ ಮನಸ್ಸಾಗರದ ಅಲೆಗಳೆಲ್ಲಾ ಅಲ್ಲೋಲ ಕಲ್ಲೋಲವಾದುವು. ಗುಳಿಬಿದ್ದ ಕಂಗಳಲ್ಲಿ ಅಶ್ರುಬಿಂದುಗಳು ತಟಪಟನೆ ಉದುರಿದುವು. ಬಾಚದ ಕೂದಲು, ಹೆರೆಯದ ಗಡ್ಡ, ಮಾಸಲು ಉಡುಪು ಒಂದಕ್ಕೊಂದು ಪೂರಕ. ಕಂಬನಿಯನ್ನು ಕೈಯಿಂದ ತೀಡಿಕೊಂಡು ನೀಳವಾದ ಉಸಿರುಬಿಟ್ಟ. ಹೃದಯ ವ್ಯಾಪ್ತಿಗೆ ವಿಶಾರಿ ಮಿಡಿಯುತಿದ್ದುದು ಅನುಭವಕ್ಕೆ ಬಂತು.

* * * *

ಪೂರ್ವದಿಕ್ತಟದಲ್ಲಿ ಮುಂಬೆಳಕು ಮೂಡಿ ಬೃಹತ್ ಬ್ರಹ್ಮಾಂಡವನ್ನು ವಿಮಲಧಾರೆಯಿಂದ ಬೆಳಗಿತು.

ಇನಿಗೊರಳ ಪಕ್ಷಿಕೋಟಿ ಆನಂದೋಲ್ಲಾಸದಿಂದ ಸುಪ್ರಭಾತವನ್ನು ಹಾಡತೊಡಗಿತು.

ಸಂಲಗ್ನದ ಫಲವಾಗಿ ಆಗಲೇ ಅರಳಿದ ಪುಷ್ಪಲೋಕದಿಂದ ಸುಗಂಧವೆಲ್ಲಾ ಬಂಡೆದ್ದು ಬರುತ್ತಿದೆ ತಾನೇ ತಾನಾಗಿ.

ಮಾಧು ಎದ್ದು ಕುಳಿತ. ಎತ್ತರವಾದ ಮಾಡಿನಲ್ಲಿ ಗೂಡುಗಟ್ಟಿ ಮರಿ ಮಾಡಿಕೊಂಡಿದ್ದ ಕಲವಿಂಕ ದಂಪತಿಗಳು ಎದ್ದು ಅತ್ತಿಂದಿತ್ತ ಹಾರಾಡುತ್ತ ಸುಪ್ರಭಾತಕ್ಕೆ ದನಿಗೂಡಿಸಿ ಕಂಬಿಯ ಮೂಲಕ ಪುರ್ರನೆ ಹಾರಿ ಹೋದುವು. ಕೆಲವೇ ಕೆಲವು ನಿಮಿಷಗಳೊಳಗಾಗಿ ಅವು ಗುಟುಕಿನೊಡನೆ ಗೂಡಿಗೆ ಬಂದಾಗ ಆ ಮರಿಗಳ ಸಂಭ್ರಮದ ಕೀರಲು ದನಿಯು ಕೇಕೆ ಕಿವಿಗೆ ಬಿತ್ತು.

ಈ ಜೀವನ ಬಂಧ ಎಷ್ಟೊಂದು ರಾಗಮಯ? ಎಷ್ಟೊಂದು ಕಾರುಣ್ಯಮಯ? ಆ ಎರಡೂ ಹಂತಗಳನ್ನು ದಾಟಿದರೆ ಉಳಿಯುವುದು ಮೃತ್ಯುವೊಂದೇ!

ಬೆಳಕು ಬಂದನಂತರ ಮಲಗಿರಲು ಮನಸ್ಸಾಗಲಿಲ್ಲ. ಎದ್ದು ಪ್ರಾತರ್ವಿಧಿಯನ್ನು ತೀರಿಸಿ ಒಳಬಂದಾಗಲೇ ಕೊಠಡಿ ಮುಂಬೆಳಕಿನ ಮಂಜುಳಧಾರೆಯಲ್ಲಿ ಮಿಂದಿತ್ತು! ರವಿಯ ರಥ ಥಳಥಳಿಸುತ್ತ ಬಾನೇರುತಿದ್ದಂತೆ ಸ್ವಲ್ಪ ಸ್ವಲ್ಪವಾಗಿ ಕಾವೇರಿತು ಹೂಬಿಸಿಲು.

ಹಿರಿಯ ಪೋಲೀಸಿನವ ಬಂದು ಹೇಳಿದ,

"ಈಪೊತ್ತು ಹಿರಿಯ ವಾರ್ಡನ್ ಜೊತೆ ಹಿರಿಯ ಮುಖಂಡರು ಜೈಲು ನೋಡಲು ಬರುತ್ತಾರೆ. ಖೈದಿಗಳು ಸ್ವಚ್ಛವಾಗಿ-ಖುಷಿಯಾಗಿ ಇರಬೇಕು. ಆ ಕೂದಲನ್ನು ಬಾಚಿಕೊ, ಜೋಲು ಮುಖ ಹಾಕಿಕೊಳ್ಳ ಬೇಡ. ಆಯಿತೇ ?"

.....ಆಯಿತೆ ?

ಆ ವ್ಯಾಖ್ಯಾನದ ಕೊನೆಯ ತುಣುಕು ಮನದಾಳಕ್ಕೆ ಸರ್ರನೆ ಇಳಿಯಿತು. ಯಾವ ಸೌಭಾಗ್ಯಕ್ಕೆ ಸಂತೋಷವಾಗಿರಲಿ ? ಎಂದುಕೊಳ್ಳುತಿದ್ದಂತೆಯೇ ಅವನು ಮುಂದಿನ ವಾರ್ಡುಗಳ ಖೈದಿಗಳಿಗೆ ವಿಷಯ ತಿಳಿಸಲು ಮುನ್ನಡೆದ. ಅವನು ಪ್ರತಿವಾರ್ಡುಗಳ ಖೈದಿಗಳಿಗೂ ವಿಷಯ ತಿಳಿಸುತಿದ್ದಂತೆಯೇ ಝಾಡಮಾಲಿಗಳು ಎಂದಿಲ್ಲದ ಶ್ರದ್ಧೆಯಿಂದ ಸ್ವಚ್ಛಕಾರ್ಯ ಕೈಕೊಂಡರು. ಸೆರೆಮನೆ ಪೈಕೊಡವಿ ಮಡಿಯುಟ್ಟಿತು.

ಹತ್ತು ಗಂಟೆಯ ಸಮಯಕ್ಕೆ ಹಿರಿಯ ವಾರ್ಡನ್ ಇತರ ಅನೇಕ ಮಂದಿಯೊಂದಿಗೆ ಆಗಮಿಸಿದ. ಅದೇ ಪೋಲೀಸಿನವ ಮುಂದಾಗಿ ನಡೆಯುತ್ತ ನತದೃಷ್ಟ ಖೈದಿಗಳಿಗೆ ಸುದ್ದಿ ಮುಟ್ಟಿಸಿ 'ಎದ್ದು ನಿಲ್ಲಿ' ಎಂದು ಕರ್ಣಸೂಚನೆ ಕೊಡುತಿದ್ದ.

"ಏಕಪ್ಪಾ ಸೊರಗಿದ್ದಿ ಆರೋಗ್ಯವಿಲ್ಲವೇ ?" ಹಿರಿಯ ವ್ಯಕ್ತಿ ಕೇಳಿತು.

"ಏನೂ ಇಲ್ಲ. ನಾನು ಇರುವುದೇ ಹೀಗೆ ?"

"ಇಲ್ಲ.....ಇಲ್ಲ, ಅವನು ಬರುವಾಗ ಚೆನ್ನಾಗಿದ್ದ. ಇಲ್ಲಿ ಸರಿಯಾಗಿ ಊಟ ಮಾಡುತ್ತಿಲ್ಲ. ಅದಕ್ಕೇ ಇರಬೇಕು. ಸೊರಗಿದ್ದಾನೆ."

"ಡಾಕ್ಟರಿಗೆ ತೋರಿಸಿ ಹಸಿವಾಗುವಂತೆ ಔಷಧಿ ಕೊಡಿಸಿರಿ." ಅವರು ವಾರ್ಡನ್ನನಿಗೆ ಸಲಹೆ ಮಾಡಿದರು.

ಸ್ವಲ್ಪ ಹಿಂದೆ ಬರುತಿದ್ದ ವೈದ್ಯರು ಮುಂದೆ ಬಂದು ಖೈದಿಯನ್ನು ಗಮನವಿಟ್ಟು ನೋಡಿ ಹೇಳಿದರು "ಮೊನ್ನೆಯಷ್ಟೆ ಇವನ ದೈಹಿಕ ಸ್ಥಿತಿಯನ್ನು ನೋಡಿರುವೆ. ಊಟ ಸರಿಯಾಗಿ ಮಾಡಿದರೆ ಸರಿ ಹೋಗುತ್ತಾನೆ. ಎಲ್ಲಾ ಸರಿಯಾಗಿದೆ ಹೃದಯ ಬಡಿತ ಸ್ವಲ್ಪ ಸ್ಥಿಮಿತ ತಪ್ಪಿದೆ. ಅದು ಸ್ವಾಭಾವಿಕ, " ಎಂದರು.

"ನೀನು ಏನಾದರೂ ಹೇಳುವುದಿದೆಯೋ ?"

"ಇಲ್ಲ.....ಸ್ವಾಮಿ."

"ನಿನ್ನ ಮನೆಯವರನ್ನು ಕರೆಸೋಣವೇ ?"

ತಲೆಯೆತ್ತದೆ ನುಡಿದ ಮಾಧು "ಬೇ.....ಡ"

"ನಿನಗೆ ಏನಾದರೂ ಅಗತ್ಯವಿದ್ದರೆ ಹೇಳು. ಏನೂ ಸಂಕೋಚಬೇಡ."

"ಇಲ್ಲ.....ಸ್ವಾಮಿ !"

"ಸಾವು ಎಂದಿದ್ದರೂ ಕಟ್ಟಿಟ್ಟ ಬುತ್ತಿ. ಸ್ಥೈರ್ಯ ಕಳೆದುಕೊಳ್ಳ ಬಾರದು."

"........."

"ಯಾವ ಬಗೆಯ ಊಟ ತಿಂಡಿ ಬೇಕು ?"

ಅವನು ಮೌನಗತಿಯಲ್ಲಿ ತಲೆಯಾಡಿಸಿದ. ಎದೆಯಾಳದಲ್ಲಿ ಬಿಸಿಯುಸಿರು ಸಿಕ್ಕಿಕೊಂಡಂತೆ ಚಡಪಡಿಸಿತು.

"ಪಾಪ, ಎಷ್ಟಾದರೂ ಎಳೆ ವಯಸ್ಸು" ಎಂದು ತಮ್ಮಲ್ಲಿಯೇ ಅಂದುಕೊಂಡರು ಅವರು.

* * * *

ರಾಷ್ಟ್ರಾಧ್ಯಕ್ಷರಿಗೆ, ಪ್ರಧಾನಿಯವರಿಗೆ ಬರೆದುಕೊಂಡ 'ಓಲೆಭಾಗ್ಯ'ದ ಅಪೀಲು ಏನಾದರೂ ಬದುಕಿಗೆ ದಾರಿ ಮಾಡಬಹುದೆಂದು ಆಶಿಸಿದ್ದ ಮನಸ್ಸಿಗೆ ತ್ರಿಶೂಲದಿಂದ ಇರಿದಂತೆ ಮಾರುತ್ತರ ಲಭಿಸಿತು ; ಅತ್ಯಂತ ಕಾತರತೆಯಿಂದ ಕಾಯುತಿದ್ದ ಮಡದಿ ಮತ್ತು ತಾಯಿ ತಂದೆಗಳಲ್ಲಿ ಉಳಿದಿದ್ದ ಕಿಂಚಿತ್ ಆಸೆಯ ಕುಡಿ ಮುರುಟಿ ಹೋಗುವಂತೆ.

ಇತಿಮಧ್ಯೆ, ಮಾಧು ಕೊಲೆಗಡುಕರೊಂದಿಗೆ ಸ್ನೇಹ ಬಾಂಧವ್ಯ ಬೆಳೆಸಿಕೊಂಡಿದ್ದ. ಸಂಧ್ಯಾಭೇಟಿಯಲ್ಲಿ ಒಬ್ಬರಿಗೊಬ್ಬರು ವಿಚಾರವಿನಿಮಯ ಮಾಡಿಕೊಳ್ಳುತ್ತ 'ತಮಗೆ ಎಷ್ಟೋವೇಳೆ ನಿದ್ದೆಯಿಲ್ಲದ ರಾತ್ರಿಗಳು, ಮತ್ತೆ ಇನ್ನೆಷ್ಟೋ ವೇಳೆ ಊಟ ಸೇರದ ಹಗಲುಗಳು ಉರುಳಿವೆ' ಎಂಬ ಸಂಕಷ್ಟವನ್ನು ಹಂಚಿಕೊಳ್ಳುತಿದ್ದರು. ಅಂತರಂಗಿಕವಾಗಿ ಒಬ್ಬರನ್ನೊಬ್ಬರು ಚೆನ್ನಾಗಿ ಅರಿತಿದ್ದರು ಕೂಡ.

"ನಮ್ಮ ನಮ್ಮ ಭೇಟಿ ಸಗ್ಗದಲ್ಲಿ ಖಂಡಿತ ಲಭಿಸುತ್ತೆ. ಆಗ ನೀನು ನನ್ನನ್ನು ಗುರುತಿಸುತ್ತೀಯಷ್ಟೆ ?"

"ಖಂಡಿತ !"

ಇಂಥ ಮಾತುಕಥೆಗಳು ಎಷ್ಟೋ ಬಾರಿ ನಡೆದಿದ್ದುವು.

ಮಡದಿ ಮತ್ತು ತಂದೆ ತಾಯಿ ಈ ಮಧ್ಯೆ ಮತ್ತೆರಡು ಬಾರಿ ಬಂದು ಹೋಗಿದ್ದರು. ದೂರದ ಊರು. ಮೇಲಾಗಿ, ಜೇಲಿನಲ್ಲಿ ದರ್ಶನಲಾಭ ಕಷ್ಟ ಎಂಬುದು ಗೊತ್ತು. ಅಂತೂ, ಎರಡು ಬಾರಿಯೂ ದರ್ಶನಲಾಭ ದೊರಕಿತ್ತು. ಅವರೊಂದಿಗೆ ಎಷ್ಟೋ ವಿಚಾರ ವಿನಿಮಯ ಮಾಡಿಕೊಂಡಿದ್ದ..... ನನ್ನ ಸತಿ, ನನ್ನ ತಂದೆ ತಾಯಿ, ನನ್ನ ಜಮೀನು, ನನ್ನ ಎತ್ತುಗಳು, ನನ್ನ ನಾಯಿ, ನನ್ನ ಗೆಳೆಯರು ಎಲ್ಲಾ ಆತ್ಮೀಯ ಬಾಂಧವ್ಯದ ಮೇಲೆ ಬಿದ್ದ ಅಘಾತದಿಂದ ತತ್ತರಿಸಿಹೋಗಿತ್ತು ಜೀವ. ಅಂತಲೇ, ಈ ಸಲಿ ತನ್ನವರು ಬರುವುದು ಬೇಡವೆ ಬೇಡ, ಎಂದು ತನ್ನಲ್ಲೇ ತೀರ್ಮಾನಿಸಿ ಕೊಂಡಿದ್ದ. ಊರಿಗೆ ಬರೆಸುವುದೂ ಬೇಡ ಎಂದು ಪೋಲೀಸರೊಂದಿಗೆ ಮತ್ತು ವಾರ್ಡನ್ನನೊಂದಿಗೂ ಹೇಳಿಕೊಂಡಿದ್ದ. ಇಷ್ಟು ದಿನ ಸೈಸಿಕೊಂಡಿದ್ದ ತಾಪ ಪರಿತಾಪಗಳು ಚಿತ್ತಭಿತ್ತಿಯಲ್ಲಿ ಕಾರ್ಮೋಡಗಳನ್ನು ಎಬ್ಬಿಸಿದ್ದುವು. ಅಳುವಷ್ಟು ಅತ್ತು ಹೃದಯವನ್ನು ಹಗುರ ಮಾಡಿಕೊಂಡಿದ್ದ. ಇನ್ನು ದೇವರ ಧ್ಯಾನ ವಿನಾ ಮತ್ತೇನಿಲ್ಲ ಎಂದು ತನಗೆ ತಾನೇ ಸಮಾಧಾನಪಟ್ಟು ಕೊಂಡು ಎದ್ದು ನಿಂತಾಗ ಭುಜದ ಮೇಲೆ ಭಾರವಾದಂತಾಗಲು ತಟ್ಟನೆ ಹಿಂತಿರುಗಿ ನೋಡಿದ. ಪೋಲೀಸಿನವ ಯಾವಾಗ ಕದ ತೆರೆದನೋ ಯಾವಾಗ ಒಳ ಬಂದನೋ ತನಗೊಂದು ಅರಿಯುದಲ್ಲಾ ಎನಿಸಿತು. ಸಣ್ಣಗೆ ಕಂಡೂ ಕಾಣದಂತಹ ಮುಗುಳು ನಕ್ಕ.

"ಏನಪ್ಪಾ ? ಇಂದು ಸ್ನಾನ ಮಾಡುತ್ತೀಯೇನು ?"

"ನೀನು ಹೇಗೆ ಹೇಳಿದರೆ ಹಾಗೆ."

"ನಾನು ಹೇಳುವುದೇನು ? ನೀನು ತಾನೆ ಹೇಳಬೇಕು."

"ಇನ್ನು 'ನನ್ನದು' ಏನೂ ಇಲ್ಲ. ನಾನು ತುಂಬಾ ಹೆದರಿಕೊಂಡಿದೇನೆ ಎಂದು ತಿಳಿಯಬೇಡ. ಸಂಸಾರ ಬಾಂಧವ್ಯ ಕಳೆದುಕೊಂಡ ಬಳಿಕ 'ಜೈಲಿನ ಬಾಂಧವ್ಯ' ಬೆಳೆದು ಬಂದಿದೆ. ಕೊನೆಗೂ ನಾನು ಒಂಟಿ ಎನಿಸು ವುದಿಲ್ಲ. ಗಲ್ಲುಗಂಬ ನನಗೆ 'ಅಂತ್ಯ ಬಾಂಧವ್ಯ' ನೀಡುತ್ತದೆ. ನನಗೆ ಎಲ್ಲಿಯೂ ಕೊರತೆ ಎಂಬುದು ತೋರಲಿಲ್ಲ.... ನೀವೆಲ್ಲಾ ತೋರುವ

ಅನುಕಂಪಕ್ಕೆ ನಾನು ತುಂಬಾ ಋಣಿ !”

ಹೊತ್ತು ಬಾನೆತ್ತಿಯನ್ನು ಮುಟ್ಟುವುದರೊಳಗಾಗಿ ಬಾಗಿಲಲ್ಲಿ ತಾಯಿ ತಂದೆ, ಮಡದಿ ಕಾಣಿಸಿಕೊಂಡರು. ಹೆಂಗಳೆಯರಿಬ್ಬರೂ ಸೊರಗಿ ಬಾಡಿ ಬೆಂಡಾಗಿದ್ದಾರೆ. ತಂದೆಯ ಸ್ಥಿತಿಯೂ ಅಂತಹ ಉತ್ತಮವೇನಲ್ಲ. ಆ ದುಃಖದಲ್ಲಿಯೂ ಏನೇನೋ ತಿಂಡಿ ತಿನಿಸುಗಳನ್ನು ತಂದಿದ್ದಾರೆ.

ಆ ಸಂಕಟಕರ ಸಮಯ ಹೇಗೆ ಕಳೆಯಿತೋ ಅವರನ್ನೆಲ್ಲಾ ಹೇಗೆ ಬೀಳ್ಕೊಟ್ಟನೋ ತಾನರಿಯ. ಹೆಂಗಳೆಯರು ರೋದಿಸುತ್ತಲೇ ಹೋದುದು ಕರುಳನ್ನು ಇರಿಯಿತು ಅವರು ಸ್ವಲ್ಪ ಅರುಗಾಗುತ್ತಲೂ,

“ದೇವರು ನಿನಗೆ ಒಳ್ಳೆಯ ಮರಣವನ್ನು ಕರುಣಿಸಲಿ” ಎಂದು ತಂದೆ ಯಾಡಿದ ಪಿಸುಮಾತು ಕಿವಿಯನ್ನು ತಾಗಿತು.

“ಯೋಚಿಸಬೇಡಿ, ಮಾಣಿಕ್ಯ ಒಬ್ಬಳೇ ಪರಲೋಕದಲ್ಲಿದ್ದಾಳೆ. ಅವಳೊಂದಿಗೆ ಸುಖವಾಗಿರುವೆ !”

ಹೊತ್ತು ಉರುಳಿತು. ನಿಶೆ ಅಡರಿತು.

ನಕ್ಷತ್ರಗಳು ಯಾವಾಗ ಮೂಡಿದುವೊ, ಅರ್ಧಚಂದ್ರಮ ಯಾವಾಗ ಮೈದೋರಿದನೋ, ಬೀಸುಗಾಳಿ ಯಾವಾಗ ತಂಪು ತಳಿಯಿತೋ ದೇವರಿಗೇ ಗೊತ್ತು.



# ಕ್ಷೇಮಂಕರೀ

## ಳ

Man's inhumanity to man
Makes countless thousands mourn.

—Robert Burns.

ಠಣ್ . ಠಣ್ . ಠಣ್ . ಠಣ್ . ಠಣ್ ....
ಠಣ್ . ಠಣ್ . ಠಣ್ . ಠಣ್ · ಠಣ್ .....

ಆ ಘಂಟೆ, ಆ ನಿನದ, ಆ ಜಾಗೃತಿ ಸಮಸ್ತ ಸುಪ್ತ ಚೇತನದ ಮೇಲೆ ಸುತ್ತಿಗೆಯು ಪೆಟ್ಟಿನಂತೆ ಬಿದ್ದಾಗ ಜನಸ್ತೋಮ ಒಂದೇ ಬಾರಿಗೆ ಸಿದ್ಧವಾಯಿತು. ಜನ....ಜನ.....ಆ ಬಯಲಿನ ತುಂಬೆಲ್ಲಾ ಜನವೇ ಜನ.

ಚೀನೀ ಸೈನಿಕರ ಕೋವಿಗಳು ಸಾಲುಗಟ್ಟಿ ಸಿದ್ಧವಾಗಿದ್ದುವು ಜಮೇದಾರ ಬಾದಶಾಹೀ ರೀತಿಯಲ್ಲಿ ಅಪ್ಪಣೆ ಮಾಡಿದ. 'ಹೂಂ ಹೊರಡಿ!' ಕಂಠಸ್ವನ ವಿಚಿತ್ರ ಪ್ರಾಣಿಯ ಕೂಗಿನಂತೆ ಮೊಳಗಿತು. ಭಾರತೀಯ ಯುದ್ಧಖೈದಿಗಳು ಸಾಲುಗಟ್ಟಿ ಹೊರಟರು. ಬಹುತೇಕವಾಗಿ ಎಲ್ಲರೂ ಗಾಯಾಳುಗಳೇ. ಗಾಯಗಳಿಗೆ ಸರಿಯಾದ ಚಿಕಿತ್ಸೆ ಇಲ್ಲದೆ ನಂಜೊತ್ತಿ ಅತೀವ ನೋವು ಕೊಡುತ್ತಿವೆ. ತಲೆನೋವು-ಜ್ವರ ಇದ್ದವರೂ ಇದ್ದರು ಆ ತಂಡದಲ್ಲಿ. ಹಿರಿಯ ಗಾಯಾಳುಗಳಿಗೆ ಮಾತ್ರ ಶಿಬಿರದಲ್ಲಿ ವಿಶ್ರಾಂತಿ. ಜನ ಸಾಲುಗಟ್ಟಿ ಹೊರಟರು. ಚೀನೀ ದೇಶಭಕ್ತಿಗೀತೆಯನ್ನು ಮುಂದಿನವ ಹಾಡತೊಡಗಿದ. ಹಿಂದಿನವರು ದನಿಗೂಡಿಸಿದರು.

ದೊಡ್ಡ ದನಿಯಲ್ಲಿ ಗಗನಭೇರಿಯಾಗಿ ಮೊಳಗಿತು ಕಂಠಸ್ವನ.

ಲರಕ್, ಲರಕ್, ಲರಕ್, ಲರಕ್, ಲರಕ್.

ಅವ್ಯಾಹತ ಪದಘಾತ ದರುಗೆಲೆ, ಕಸಕಡ್ಡಿ, ಮರಳ ಮೇಲೆ ಬೀಳುವಾಗ ದೇಶಭಕ್ತಿ ಗೀತೆಗಳಿಗೆ ಶೃತಿ ರೂಪ ಲರಕ್, ಲರಕ್, ಲರಕ್, ಲರಕ್.

ಅಂಕು ಡೊಂಕಿನ ರಸ್ತೆಯ ಬದಿಯಲ್ಲಿ ಸಾಲುಗಟ್ಟಿ ನಡೆಯುವ ಕೋವಿಗಾರರ ಕಾವಲಿನಲ್ಲಿ ಯುದ್ಧಖೈದಿಗಳು ಗುದ್ದಲಿ–ಹಾರೆ–ಪಿಕಾಶಿಗಳನ್ನು ಹೊತ್ತು ಭಾರಭಾರವಾದ ಹೆಜ್ಜೆಗಳನ್ನು ತೆಗೆಯಲಾರದೆ ತೆಗೆಯುತ್ತ ನಡೆಯುತಿದ್ದರು. ಹಾಗೆ ಆ ಹಾದಿ ಎಷ್ಟು ದೂರ ಸಾಗಿತೋ.... ಚಿಂತಾವಲಯದಲ್ಲಿ ಚಲಿಸುವ ಚಿತ್ತ, ಅಶಕ್ತ ಸ್ಥಿತಿಯಲ್ಲಿ ಉಸಿರಾಡುವ ಜೀವ; ಅಂದಮೇಲೆ, ಅವರ ಸಂಕಟವನ್ನು ಬಲ್ಲವರೇ ಬಲ್ಲವರು.

ಹೆಜ್ಜೆ ಹೆಜ್ಜೆಗೂ ಹಿಂದುಳಿವ ಹಾದಿಯಲ್ಲಿ ಗಮ್ಯಸ್ಥಾನವನ್ನು ಸೇರಿದಾಗ ರಾಕ್ಷಸ ನೀತಿಯ ಸಾಕ್ಷಾತ್ಕಾರವಾಯಿತು. ಶಕ್ತರು-ಅಶಕ್ತರು ಎಂಬ ಪರಿಭೇದವಿಲ್ಲದೆ ಎಲ್ಲರೂ ಕಾರ್ಯನಿಯೋಜಿತರಾದರು. ನೆತ್ತರು ಬಸಿದ ಗಾಯಾಳು ...ಇನ್ನೂ ಮಾಗದ ಗಾಯ ....ಬಿಳಿಚಿಕೊಂಡ ಮುಖ. ಕೆಲವರೇನೋ ಪರವಾಯಿಲ್ಲ. ಇನ್ನೂ ಕೆಲವರದು ಶೋಚನೀಯ. ಬೃಹತ್ ಸೇತುವೆಯ ದುರಸ್ತಿ ಕಾರ್ಯ. ಅನೇಕ ಮಂದಿ ಚೀನೀ ಕಾರ್ಮಿಕರೂ ಇದ್ದಾರೆ.ಅವರೊಂದಿಗೆ ಭಾರತೀಯ ಸೈನಿಕ ಖೈದಿಗಳ ಸೇರ್ಪಡೆ ಬಂದೂಕಿನ ಗುರಿಯಲ್ಲಿ.

ಹಾರೆ–ಪಿಕಾಶಿಗಳ ಠಳ್ ಠಳಾರ್ ನಿನಾದ ಕರ್ಣದೇಶಗಳನ್ನು ಒಂದು ಕಡೆ ಮುಟ್ಟುತಿದ್ದರೆ ಇನ್ನೊಂದು ಕಡೆ ಮೇಸ್ತ್ರಿಗಳ ಉಚ್ಚಕಂಠಸ್ವನ ಹರಿಯುತಿತ್ತು "ಬೇಗ ಬೇಗ ಕೆಲಸ ಮುಗಿಸಿ !"

ಆ ಚೀನೀ ಭಾಷೆ, ಆ ಚೀನೀ ಜನ ತೀರಾ ಹೊರತಾದವರು ಭಾರತ ಸಂಸ್ಕೃತಿಗೆ ಎನಿಸುವಷ್ಟು ವಿಕೃತ....

ಭಾರತೀಯ ಯೋಧ ಖೈದಿಗಳು ಮೈ ಬಾಗಿ ಅಗೆದು ಪಾಯ ತೋಡುತಿದ್ದಾರೆ. ಕೈಕಾಲುಗಳ ಗಾಯಗಳಿಗೆ ಧೂಳು ಅಂಟುವುದು ಮಾತ್ರವಲ್ಲ; ನೊಣಗಳೂ ಮುತ್ತುತ್ತವೆ. ಸಾಕ್ಷಾತ್ ಯಮರಾಜ ತನ್ನ ರಕ್ತಾಕ್ತ ಹಸ್ತಗಳಿಂದ ತಟ್ಟಿ ತಟ್ಟಿ ಗಾಯವೆಬ್ಬಿಸಿರುವಂತೆ ಮೈಯೆಲ್ಲಾ ಗಾಯ. ಸೆರೆ ಸಿಕ್ಕಿದಾಗ ನೆಲದ ಮೇಲೆ ಎಳೆದಾಡಿ ದೊಣ್ಣೆಗಳಿಂದ ಬಡಿದು ಮೂಡಿಸಿದ

ಗಾಯ; ಬಂದೂಕಿನ ಗಾಯವಲ್ಲ. ಹಾಗೆ ಕೆಲಸಕ್ಕೆ ನಿಯೋಜಿಸಲ್ಪಟ್ಟವರ ಸಹಾನಿಯೂ ಒಬ್ಬ. ಮೈ ವ್ರಣಗಳಿಂದ ತುಂಬಿ ನಂಜೊತ್ತಿ ಖಂಡ ಖಂ ಗಳೂ ನೋಯುತಿದ್ದುವು. ಕೆಲಸ ಮಾಡಲಾರೆನೋ ಎಂದು ಗೀಳಿಡ ತಿತ್ತು ಜೀವ.

ಆದರೆ,

ಚೀನೀ ಕೆಂಬೂತಗಳಿಗೆ ಎದೆಯೊಳಗೆ ಹೃದಯವೆಂಬುದು ಇದ್ದರಷ್ಟೆ ಕೋವಿ ಹಿಡಿದು ಗಸ್ತು ತಿರುಗುವವರ ಮುಂದೆ ಆಗದೆಂದು ಯಾವ ಬಾಯಿ ತಾನೇ ಹೇಳಬಲ್ಲುದು? ಕೆಲಸ-ಕೆಲಸ ಎಷ್ಟು ಮಾಡಿದರೂ ಮುಗಿಯದ ಕೆಲಸ. ಒಂದು ಗಳಿಗೆ ವಿಶ್ರಮಿಸಿಕೊಳ್ಳುವಂತೆಯೂ ಇಲ್ಲ. ಮೈಯ್ಯಲ್ಲಿ ಹುಚ್ಚಿದ್ದು ಬಸಿಯುವ ಸ್ವೇದಧಾರೆ; ಒಣಗಿದ ತುಟಿಗಳು; ಕೀಲು ಕೀಲು ಗಳಲ್ಲೂ ನೋವು; ಹೊಟ್ಟೆಯ ಹಸಿವು. ನೆತ್ತಿಯುರಿಯುವಂತಹ ರಣ ಬಿಸಿಲು.

ಎಂದಿಗೆ ಹೊತ್ತು ಉರುಳುವುದೋ ಎಂದು ಪರಿತಪಿಸುತ್ತದೆ ಮನಸ್ಸು. ಆದರೆ, ಅಂತರಿಕ್ಷದ ವಕ್ಷವನ್ನೇರಿದ ತರುಣಾರುಣ ಇನ್ನೂ ಇಳಿಮುಖನಾಗಿಲ್ಲ. ನಿರ್ಜಲ-ನಿರ್ಮಲ ಜೀಮೂತಯೂಥಗಳು ಸುಖಯಾತ್ರೆ ಗೈಯುತಿದ್ದರೂ ರವಿಯ ವಿಜೃಂಭಣೆಗೆ ತೆರೆಯೊಡ್ಡುವ ಗೋಜಿಗೂ ಹೋಗಲಿಲ್ಲ.

ಕಾರ್ಯ ನಿರತ ಭಾರತ ಖೈದಿಗಳು ಅಶಕ್ತ ಸ್ಥಿತಿಯಲ್ಲಿ ಕೆಲಸ ಮಾಡು ವಾಗ ಚೀನೀಯರನ್ನು ಸ್ವಭಾಷೆಯಲ್ಲಿ ವಾಚಾಮಗೋಚರವಾಗಿ ತೆಗಳಿ ತಿರ ಸ್ಕರಿಸುತಿದ್ದುದು ಚೀನೀಯರಿಗೆ ಅರ್ಥವಾದರಷ್ಟೆ... ಜಮೇದಾರ ಒಂದೇ ಸಮನೆ ಗದರಿಕೊಳ್ಳುತಿದ್ದ. ಸಹಾನಿ ಇತರ ಖೈದಿಗಳ ಕಡೆ ಓರೆಗಣ್ಣಿಂದ ನೋಡಿ ತಿರಸ್ಕಾರದ ಕಿರುನಗೆ ಬೀರಿದ.

ಭಾರತದ ಸರಕಾರಕ್ಕೂ ಚೀನೀ ಸರಕಾರಕ್ಕೂ ಶಾಂತಿಯುತ ಒಪ್ಪಂದ ವಾಗಿ ಯುದ್ಧ ನಿಲ್ಲಿಸಲ್ಪಟ್ಟಿದ್ದರೂ ಪರಸ್ಪರ ಯುದ್ಧ ಖೈದಿಗಳ ವಿನಿಮಯ ವಿನ್ನೂ ನಡೆದಿರಲಿಲ್ಲ. ಭಾರತ ಸರಕಾರದ ಡಾಕ್ಟರಿಂದ ಚಿಕಿತ್ಸೆ ದೊರೆಯು ತ್ತಿದ್ದರೂ ಆರೈಕೆ ಚೀನೀ ಸರಕಾರದ್ದು.

ಸರಿಯಾದ ಆರೈಕೆಯೂ ಇಲ್ಲ; ವಿಶ್ರಾಂತಿಯೂ ಇಲ್ಲ; ಉತ್ತಮ ಆಹಾರವೂ ಇಲ್ಲ.

ಖೈದಿಗಳು ತಂಡ ತಂಡವಾಗಿ ವಿವಿಧ ದಿಕ್ಕುಗಳಲ್ಲಿ ಕೆಲಸ ಮಾಡುವರು.

ಚೀನೀ ಭೃತ್ಯರು ದೇಶ ಭಕ್ತಿಗೀತೆಗಳನ್ನು ಹಾಡುತ್ತ ಕೋವಿ ಹೊತ್ತು ಗಸ್ತು ತಿರುಗುತಿದ್ದರು.

* * * *

ಮುಂದ ಮುಂದ ಸಂಚಾರೀ ಚೈತ್ರಾ ಸಿಲ ಒಯ್ಯೊಯ್ಯನೆ ತೀಡುತಿದ್ದ.

ಅಸ್ತಗಿರಿಯ ಮಸ್ತಕದ ಮೇಲೆ ಅರುಣಾರುಣ ಮೋಕ್ಷ ಚಿಂತನದಲ್ಲಿ ರಾರಾಜಿಸುತಿದ್ದ.

ಭೂಭಾಗವನ್ನು ಇಬ್ಭಾಗಿಸಿ ಹರಿದ ಅಂಕು ಡೊಂಕಿನ ರಸ್ತೆ. ಮೈಬಾಗಿ ಏಕ ಪ್ರಕಾರವಾಗಿ ದುರಸ್ತಿಗೊಳಿಸುವ ಕಾರ್ಮಿಕರು. ಆ ಹಲವಾರು ಮಂದಿ ಯಲ್ಲಿ ಅದೆಷ್ಟು ಮಂದಿ ನೋವಿನಾಗರದಲ್ಲಿ ಜೀವ ಹಿಡಿದಿದ್ದರೋ, ಎಡೆ ಬಿಡದ ಅತೀವ ಪರಿಶ್ರಮದಿಂದ ಬಳಲಿದ ಶರೀರ ಯಾವ ಘಳಿಗೆಯಲ್ಲಿ ಕುಸಿ ಯುವುದೋ.....ಹೇಳುವಂತಿಲ್ಲ. ಚೀನೀ ತತ್ವಗಳ ಇಕ್ಕಳದಲ್ಲಿ ಸಿಕ್ಕಿದ ಜನ ಸಾಮಾನ್ಯರ ಹಣೆಯ ಬರಹವನ್ನು ನೋಡಿ ಬೆವರಿ ಕಂಗಾಲಾದ ಯುದ್ಧ ಖೈದಿಗಳು ಕಳವಳ–ಸಂಕಟಗಳ ಪ್ರಚಂಡ ಮುಷ್ಟಿಯಲ್ಲಿ ಸಿಕ್ಕಿ ಅಸ್ತಿತ್ವ ವನ್ನು ಕಳೆದುಕೊಂಡಂತೆ ಮೌನವಹಿಸಿದ್ದರು.

ಚೀನೀ ಭಾಷೆಯ ದೇಶಭಕ್ತಿಗೀತೆಗಳು ಮೊಳಗುತಿದ್ದುವು.

ಅವುಗಳ ಮುಖೇನ ಕಾರ್ಮಿಕರನ್ನು ಪ್ರಚೋದನೆ ಮಾಡುವುದು ಅವರ ಉದ್ದೇಶ. ಈ ನೂರಾರು ಮಂದಿಯ ಸಂಕಷ್ಟವನ್ನು ಸ್ವತಃ ನೋಡು ವಾಗ ತನ್ನದೇನೂ ವಿಶೇಷವಲ್ಲ ಎಂದುಕೊಂಡ ಸಹಾನಿ.

ಮಾಯದ ಗಾಯ ಮಾಗದ ಮನ.....ಅಂಗಾಂಗಗಳಲ್ಲಿ ಪ್ರವಹಿಸುವ ನೆತ್ತರಿನ ಉಷ್ಣೋಷ್ಣ ಝುರಿ. ಮೇಲಿಂದ ಮೇಲೆ ಹೊಮ್ಮುವ ನಿಟ್ಟುಸಿರು.

ದೂರ ದೂರ ದಿಗ್ದೇಶದಲ್ಲಿ ಶೋಭಿತ ರವಿ ಅಸ್ತಂಗತನಾದ.

ಚೀನೀಯ ಮೇಸ್ತ್ರಿ ತುತ್ತೂರಿ ಊದಿದ.

ಭೂಊಊಂ ! ಭೂಊಊಊಂ ! ಭೂಊಊಊಊಂ !

ಅನಂತರ, ತುಂಡು ಹಿಂದಿಯಲ್ಲಿ ಕಾಮಗಾರಿಕೆಗೆ ಪರಿಸಮಾಪ್ತಿ ಹಾಡಿದ.ಜೋಗಯ್ಯನ ಜಾಗಟೆಯಂತೆ ಮೊಳಗಿತು ಚೀನೀಧ್ವನಿ.

ಕಾರ್ಮಿಕರು ಕೆಲಸ ನಿಲ್ಲಿಸಿದರು ಬಹುತೇಕವಾಗಿ ಭಾರತೀಯು
ಇದ್ದ ತಂಡ ನಡುವನ್ನು ನೆಟ್ಟಗಾಗಿಸುವುದರೊಳಗಾಗಿ ಚೀನೀಯರು ಹೊ
ಡಲು ಸಿದ್ಧರಾಗಿದ್ದರು. ಮೈ ಕೈಗಳಲ್ಲಿ ತುಂಬಿದ ಧೂಳನ್ನು ಒದರಿ ಕ
ವಸ್ತ್ರದಿಂದ ಮುಖವನ್ನು ಒರಿಸಿಕೊಂಡ ಅವರು ಆಗಲೇ ದಾವುಗಾಲ
ಹಾಕುತಿದ್ದಾರೆ. ಇವರೆಲ್ಲಾ ನಡುನೋವು ಕೈಕಾಲು ನೋವುಗಳಿಂ
ಧೂಳು ಕೊಡವಿ ಸಿದ್ಧವಾಗುವುದೇ ಕೆಲವು ನಿಮಿಷ ತೆಗೆದುಕೊಂಡಿತೊ
ಏನೋ....

ಚೀನೀ ಮೇಸ್ತ್ರಿ ಅವಸರಿಸಿದ. ಕೋವಿಗಾರರು ಕೋವಿಗಳನ್ನು ಕಣಕ
ಎನಿಸಿ ಎಚ್ಚರಿಸಿದರು.

ಖೈದಿಗಳಿಗೂ ಒಮ್ಮೆ ಠಾಣ್ಯವನ್ನು ಮುಟ್ಟಿದರೆ ಸಾಕಾಗಿತ್ತು. ಕಾಲ
ಳಿದುಕೊಳ್ಳುತ್ತಾ ಹಾದಿ ನಡೆದರು. ಗಸ್ತಿನವನ ಕಾವಲಿನಲ್ಲಿ ಹಾದಿ ಸಾಗಿತು
ಎಂದಿಗೆ ಇಲ್ಲಿಂದ ಬಿಡುಗಡೆಯಾಗುವುದೋ ಎಂಬ ಗೀಳು ಎಲ್ಲರ ಮನದಲ್ಲಿ

"ನಮ್ಮ ಕೈಯಲ್ಲಿ ಕೋವಿಗಳಿದ್ದಿದ್ದರೆ ಈ ಧೂರ್ತರನ್ನು ಒಂದೇ
ಬಾರಿಗೆ ಮುಗಿಸಿ ಬಿಡುತ್ತಿದ್ದೆ !"

"ಯುದ್ಧ ಖೈದಿಗಳನ್ನು ಈ ರೀತಿ ಹಿಂಸಿಸುವುದುಂಟೇ ?"

"ಇವರು ಮನುಷ್ಯರೇ ಅಲ್ಲ; ರಾಕ್ಷಸರು !"

"ಖಂಡಿತ!"

"ಹೊಟ್ಟೆತುಂಬ ಹಿಟ್ಟು ಹಾಕಿ ದುಡಿಸಿದರೆ ಅದೊಂದು ರೀತಿ. ನಾವಿ
ರುವ ಸ್ಥಿತಿಯಲ್ಲಿ ದುಡಿಮೆಯೆಂದರೆ ಹೃದಯ ಹೀನತೆ."

"ಅಲ್ಲ, ಅಲ್ಲ. ಮೃಗ ಪ್ರವೃತ್ತಿ."

ಎಲ್ಲರೂ ಮುಗುಳು ನಕ್ಕರು. ನೊಂದ ಜೀವಗಳು ತಿಳಿ ಹಾಸ್ಯರಸದ
ತನಿಯುಂಡುವು.

* * * *

ಮಧ್ಯಾಹ್ನ ರವಿ ಕೋಟ್ಯಾನುಕೋಟಿ ಉಷ್ಣ ತಪ್ತ ಕಿರಣಗಳಿಂದ ಅಗ್ನಿ
ಸ್ಫುಲಿಂಗಗಳ ಮಳೆಗರೆಯುತಿದ್ದ.

ಮೂರು ನಾಲ್ಕು ದಿನಗಳಿಂದ ಜ್ವರ ಜೋರೆ. ಉಷ್ಣೋಷ್ಣ ಹವೆಯ
ತಾಪಕ್ಕೂ ಜ್ವರದ ತಾಪಕ್ಕೂ ಮೈಮನಗಳು ಸಿಡಿದೊಡೆಯುತ್ತವೆಯೋ

ಎಂಬಷ್ಟು ಹಿಂಸ್ರಕ. ಇತರ ಖೈದಿಗಳನ್ನೆಲ್ಲಾ ಸೇತುವೆ ನಿರ್ಮಾಣಕ್ಕೆ ಕರೆದೊಯ್ದುದರಿಂದ ಸಹಾನಿ ಒಬ್ಬನೇ ಉಳಿದಿದ್ದ. ಜ್ವರ ಬಂದುದರಿಂದ ವಿಶ್ರಾಂತಿ.

ಹೊರಗಡೆಯಿದ್ದ ಕಾವಲುಗಾರರ ನಗೆಚಾಟಿಕೆಯ ಮಾತುಗಳು, ನಗುವಿನ ಗುಲ್ಲು ವಿಚಿತ್ರತರವಾಗಿ ಹೊಮ್ಮಿ ನಿಶ್ಯಬ್ದತೆಯ ಪದ ಧ್ವನಿಯಂತೆ ತಲೆಯಮೇಲೆ ಠಳ್ ಠಳಾರನೆ ಬೀಳುತಿತ್ತು. ಮೇಲಿಂದಮೇಲೆ ಅವರ ಮಾತುಕತೆ, ನಗೆಯ ಗುಲ್ಲು ಕಿವಿಗಳನ್ನು ಮುಟ್ಟುತ್ತಲೇ ಇವೆ.

ಇಂದು, ಈವರೆಗೆ ವೈದ್ಯಮಹಾಶಯ ಬಂದೇ ಇರಲಿಲ್ಲ. ಜ್ವರದ ಕಾವು ಹೆಚ್ಚುತ್ತಲೇ ಇತ್ತು. ಸಹಾನಿ ತಾಳಲಾಗದೆ ಹೊರಳಾಡುತ್ತ ಸಣ್ಣಗೆ ನರಳುತಿದ್ದ. ನಂಜೊತ್ತಿದ ಗಾಯಗಳಲ್ಲಿ ಕೀವು ತುಂಬಿ ಅತೀವ ನೋವು. ಅದಕ್ಕೆ ಯಾವುಯಾವುದೋ ಮದ್ದನ್ನು ಪೂಸಿದ. ಆದರೂ, ಅವು ಸಂಪೂರ್ಣ ವಾಗಿರಲಿಲ್ಲ.

ಜಿಂಕ್‌ಶೀಟ್ಸ್ ಹೊಚ್ಚಿದ ಮಾಡು. ಒಳಗಡೆ ಗಾಳಿ ಬೆಳಕುಗಳ ತೀವ್ರ ಅಭಾವ. ಜ್ವರದ ಕಾವಿನೊಂದಿಗೆ ಹವೆಯ ಕಾವಿನ ಸೆಣಸಾಟ. ಒಮ್ಮೆ ಮಂಪರ, ಒಮ್ಮೆ ನಿದ್ದೆ, ಮತ್ತೊಮ್ಮೆ ಎಚ್ಚರ ಹೀಗೆ ಅದೆಷ್ಟು ಹೊತ್ತು ಕಳೆಯಿತೋ.....ಕತ್ತಲೆಯ ಬೀಡಿನಲ್ಲಿ ಹೊತ್ತಿನ ಪರಿವೆ ಮೂಡುವುದು ಕಷ್ಟವೇ. ಜ್ವರದ ಅಮಲಿನಲ್ಲಿ ಎತ್ತ ದೃಷ್ಟಿ ಹೊರಳಿಸಿದರೂ ನಿರಾಕಾರತೆಯ ಸ್ವರೂಪ ನಲಿಯುತ್ತಿರುವುದು ಕಣ್ಗೋಚರ. ಕಣ್ಣು ಮುಚ್ಚಿದರೂ ಕಣ್ಣನ್ನು ತಿವಿಯುವಂತಹ ಉಗ್ರತೆ.

ಒಮ್ಮೆ ನಿದ್ದೆ ಬಂದರೆ ಸಾಕು ಎಂದು ಮುಖದ ಮೇಲೆ ದುಪ್ಪಟಿ ಎಳೆದುಕೊಂಡ.

ಲರಕ್. ಲರಕ್. ಲರಕ್. ಲರಕ್.

ಮುಚ್ಚಿದ ಬಾಗಿಲ ಬಳಿ ಪಾದ ಸಪ್ಪಳ ಕೇಳಿ ಬಂತು. ಒಡನೆ ಕುತೂಹಲತೃಷಿತನೋಟ ಅತ್ತ ಸಹಜವಾಗಿ ಹೊರಳಿತು. ಬಾಗಿಲ ಕೀಲಿಯನ್ನು ಕಿಣಿಕಿಣಿ ಸದ್ದಿನೊಡನೆ ತೆರೆದು ವ್ಯಕ್ತಿಯೊಂದು ಒಳಗಡೆ ಪದಾರ್ಪಣೆ ಮಾಡಿತು. ಮಸುಕು ಬೆಳಕು. ಬಂದವರಾರೆಂದು ತಿಳಿಯುವುದು ಕಷ್ಟ.

ಬಂದ ವ್ಯಕ್ತಿ ನೇರವಾಗಿ ಹಾಸಿಗೆಯ ಬಳಿಗೆ ಬಂದ.

"ಏನಪ್ಪಾ, ಹೇಗಿದ್ದಿ ?"

"ಯಾರು ಡಾಕ್ಟರೇ ?"

"ಹೌದು. ಗುರುತು ಹತ್ತಲಿಲ್ಲವೇ ?"

"ಮೂರು ದಿನಗಳಿಂದ ಜ್ವರ ಬಿಟ್ಟೇ ಇಲ್ಲ ಡಾಕ್ಟರ್ !"

ಡಾಕ್ಟರ್ ದೈಹಿಕ ಪರೀಕ್ಷೆ ನಡೆಸುವಾಗ ಅವನೊಂದಿಗೆ ಬಂದಿದ್ದ ಚೀನೀ ನರ್ಸ್ ಅವನಿಗೆ ಸಹಾಯಕಳಾಗಿ ನಿಂತಳು. ನಂಜು ವಿಾರದಂತೆ ಇಂಜಕ್ಷನ್ ಕೊಟ್ಟು ಕೆಲವು ಮಾತ್ರೆಗಳನ್ನೂ ನೀಡಿದ.

"ಏನೂ ಚಿಂತೆ ಮಾಡಬೇಡ. ಗಾಯ ಮಾಗದಿರುವುದರಿಂದ ಜ್ವರ. ಇನ್ನು ಒಂದೆರಡು ದಿನಗಳೊಳಗಾಗಿ ಜ್ವರ ಬಿಡುತ್ತೆ."

"ನೀವು ನಿನ್ನೆಯೇಕೆ ಬರಲಿಲ್ಲ ? ಔಷಧಿ ಕ್ರಮವಾಗಿ ಕೊಟ್ಟಿದ್ದಿದ್ದರೆ ಇಷ್ಟರೊಳಗಾಗಿ ಗುಣವಾಗುತಿತ್ತೇನೋ....ಈ ನೋವು-ಜ್ವರ ತಾಳಿಕೊಳ್ಳಲಾರೆ. ಮಲಗಲು ಒಂದು ಹಾಸಿಗೆಯೂ ಇಲ್ಲ. ಒರಟು ನೆಲ ಮೈ ಗೊತ್ತುತ್ತೆ. ಈ ದುಪ್ಪಟಿಯಲ್ಲಿರುವ ಕೊಳಕು ರೋಗಾಣುಗಳು ಎಷ್ಟು ಮೈ ಸೇರಿವೆಯೋ ದೇವರಿಗೇ ಗೊತ್ತು."

"ಏನು ಮಾಡುವುದಕ್ಕಾಗುತ್ತದೆ ? ಬಂದದ್ದನ್ನೆಲ್ಲಾ ಅನುಭವಿಸಬೇಕು."

"ಊಟ ಸರಿಯಾಗಿಲ್ಲ. ಮುಗ್ಗುಲಕ್ಕಿಯ ಪರಾತ ಕೊಡುತ್ತಾರೆ. ಅದನ್ನು ಜೀವಧಾರಣೆಯ ದೃಷ್ಟಿಯಿಂದ ಉಣ್ಣುವುದಷ್ಟೆ. ನೀವಾದರೆ ಖಂಡಿತ ಮುಟ್ಟಲಾರಿರಿ."

"ಭಯ್ಯಾ ನಾನೂ ಯುದ್ಧಖೈದಿಯಾಗಿದ್ದಿದ್ದರೆ ಈ ಪರಾತವನ್ನೇ ತಿಂದು ಜೀವಿಸಬೇಕಿತ್ತು....ಹೇಗಾದರೂ ಜೀವಧಾರಣೆ ಮಾಡಬೇಕಲ್ಲ ? ಈಗ ಚೀನಾ ಸರಕಾರಕ್ಕೂ ಭಾರತ ಸರಕಾರಕ್ಕೂ ಒಪ್ಪಂದವಾಗುತ್ತಿದೆ. ಅದು ಎಷ್ಟು ಕ್ಷಿಪ್ರವಾಗಿ ನಡೆಯುತ್ತದೆ ಎಂಬುದರ ಮೇಲೆ ನಿರ್ಣಯ. ನೋಡೋಣ, ಎಂದಾದರೂ ಸಂಧಾನುಸಂಧಾನಗಳಿಂದ ಸೂಕ್ತ ರೀತಿಯಲ್ಲಿ ನಿರ್ಣಯವಾಗಲೇಬೇಕು. ಅಲ್ಲಿಯತನಕ ಸ್ವಲ್ಪ ಕಷ್ಟ. ಒಂದಲ್ಲ, ಒಂದು ದಿನ ಎಲ್ಲವೂ ಸರಿಹೋಗುತ್ತದೆ....."

ಸಹಾನಿ ನರಳಿದ. ಒಡಲೆಲ್ಲಾ ಸಂಕಟದ ಗಣಿ. ಖಂಡಖಂಡಗಳೂ ನೋವಿನ ಆಗರ.

ಡಾಕ್ಟರು ನರ್ಸಳಿಗೆ ಔಷಧಿಯ ವಿವರಣೆ ನೀಡಿದ. ಪೌಷ್ಠಿಕ ಆಹಾರದ ಟಿನ್ನನ್ನು ಅವಳ ಕೈಗೆ ನೀಡಿ ಕೊಡುವ ರೀತಿಯನ್ನೂ ತಿಳಿಸಿ ಕೊಟ್ಟು, ರೋಗಿಗೆ ಎರಡು ಸಾಂತ್ವನದ ಮಾತು ಹೇಳಿ ಹೊರಟ.

* * * *

ರೆಡ್‌ಕ್ರಾಸ್ ನಿಯೋಜಿತ ವೈದ್ಯ ಆಗಾಗ ಬಂದು ನೋಡುತ್ತಲೇ ಇದ್ದ. ಪೌಷ್ಠಿಕ ಆಹಾರ ಮತ್ತು ಗಾಳಿ ಬೆಳಕುಗಳ ತೀವ್ರ ಅಭಾವದಿಂದ ರೋಗಿಯ ಗಾಯಗಳು ಮಾಗಲಿಲ್ಲ. ಡಾಕ್ಟರ್ ಮತ್ತೆ ಬಂದು ಹೋದ. ಆತನ ವಿಶ್ವಸ್ತ ದಾದಿ ನುಡಿದಳು,

"ನಾನೀಗಲೇ ಹೋಗಿ ಗಂಜಿ ತರುವೆ. ಅದುವರೆಗೆ ಔಷಧಿ ತೆಗೆದು ಕೊಳ್ಳಬೇಡ."

ಸಹಾನಿ ಸ್ನೇಹಭಾವದಿಂದ ತಲೆಯಾಡಿಸಿದ.

ಅವಳು ಮುಸುಗತ್ತಲಿನಲ್ಲಿ ಕರಗಿ ಹೋದಳು. ಹಿಂದಿಲಿಂದ ನಯನ ದ್ವಯಗಳು ಅತ್ತಲೇ ನಿಟ್ಟಿಸಿದುವು. ಅಪರದೇಶದಲ್ಲಿ ಜೋಲಾಡುವ ನಾಲ್ಕಾರು ಜಡೆಗಳು; ತಲೆಯ ಮೇಲೆ ಟೋಪಿ, ಮಾಸಲು ಉಡುಪು. "ಅಹಹ! ಎಂತಹ ವೇಷವೋ" ಎಂದುಕೊಂಡ.

ಸ್ವಲ್ಪ ಹೊತ್ತಿನೊಳಗಾಗಿ ಅವಳು ಔಷಧಿಯೊಡನೆ ಆಗಮಿಸಿದಳು. ಆ ಹೆಜ್ಜೆಗಳ ವಿಶಿಷ್ಟ ಸದ್ದು ಬಾಗಿಲ ಬಳಿಯಲ್ಲೇ 'ದಾದಿ' ಎಂಬುದನ್ನು ಸಾರಿ ಹೇಳುತ್ತವೆ.

ಅವಳು ಔಷಧಿಯನ್ನು ನೀಡಿ ಸ್ನೇಹಪರತೆಯಿಂದ ಹೇಳಿದಳು,

"ಔಷಧಿಯಲ್ಲಿ ನಂಬಿಕೆ ಇಲ್ಲದಿದ್ದರೆ ಗುಣವಾಗುವುದು ಕಷ್ಟ."

"ನಂಬಿಕೆ ಇಲ್ಲದಿದ್ದರೆ ಔಷಧಿ ತೆಗೆದುಕೊಳ್ಳುತ್ತಲೇ ಇರಲಿಲ್ಲ."

ಹಾಗೆಂದರೂ ಅಸಡ್ಡೆ-ಅಶ್ರದ್ಧೆಗಳ ತನಿರಸವಾಗಿ ಹರಿಯಿತು ದನಿ.

"ಇತ್ತ ಕಾಲುಗಳನ್ನು ನೇರವಾಗಿ ನೀಡು. ಕಟ್ಟು ಬಿಚ್ಚುವೆ."

"ನಿನ್ನ ಹೆಸರೇನೆಂದು ತಿಳಿಯಬಹುದೇ ?"

"ಚಿಯಾಂಗ್-ಚಿಂಗ್."

"ನೀನಿಲ್ಲಿ ಖಾಯಂ ನರ್ಸೇ ? ಅಥವಾ ನಮಗಾಗಿ ತಾತ್ಕಾಲಿಕ ವೃತ್ತಿ ಕೈಕೊಂಡಿರುವೆಯೋ....?"

"ಖಾಯಂ ನರ್ಸ್. ಎಂಟು ವರ್ಷ ಸರ್ವೀಸಾಗಿದೆ. 'ಚಿಯಾಂಗ್ ಚಿೊ' ಆಸ್ಪತ್ರೆಯಲ್ಲಿ ಕೆಲಸ ಮಾಡುತ್ತಿರುವೆ."

ಆ ಮಾತು ಸಮಾಧಾನ ಮೂಡಿಸಿತು.

ಅವಳು ಸ್ವಿಚ್ ಅದುಮಿ ದೀಪ ಹಚ್ಚಿದನಂತರ ಕಾಲಿನ ಪಟ್ಟಿಯನ್ ಬಿಚ್ಚತೊಡಗಿದಳು.

"ನರನರಗಳಲ್ಲಿ ಅತೀವ ಸೆಳೆತ. ಗಾಯಗಳಲ್ಲಿ ವಿಪರೀತ ಉರಿ ನೋವು. ಮೇಲಾಗಿ, ನಿಶ್ಶಕ್ತಿ. ಅಲ್ಲದೆ ಪುಷ್ಟಿಕರವಾದ ಆಹಾರದ ಅಭಾವ ಚೇತರಿಸಿಕೊಳ್ಳಲು ಅವಕಾಶ ಕೊಡುತ್ತಿಲ್ಲ."

"ಇಷ್ಟೊಂದು ಮಂದಿ ಸೈನಿಕರಿಗೆ ಪುಷ್ಟಿಕರವಾದ ಆಹಾರ ಒದಗಿಸು ವುದು ಕಷ್ಟವಲ್ಲವೆ ?"

"ಅದೇ ಭಾರತದಲ್ಲಿ ಖೈದಿಗಳಾಗಿರುವ ಚೀನೀಯರು ಹಿಂದಿರುಗಿದ ನಂತರ ವಿಚಾರಿಸಿ ನೋಡು. ಅವರನ್ನು ಭಾರತ ಹೇಗೆ ನೋಡಿಕೊಂಡಿತು ಎಂದು ? ಚೀನೀಯರಿಗೆ ದಯೆಯಿಲ್ಲ. ನನ್ನಂತಹ ಗಾಯಾಳುವಿಗೆ ಒಳ್ಳೆಯ ಹಾಸಿಗೆಯೂ ಇಲ್ಲ; ಊಟವೂ ಇಲ್ಲ."

"ಈ ವಿಚಾರದಲ್ಲಿ ನಾನು ನಿಸ್ಸಹಾಯಕಿ. ದೇವರು ನಿನಗೆ ಆರೋಗ್ಯ ಕೊಡಲಿ ಎಂದು ಪ್ರಾರ್ಥಿಸುವೆ."

ಅರೆ.....! ಎಂತಹ ಆಶ್ಚರ್ಯ ? ನನ್ನ ಕಿವಿಗಳನ್ನು ನಂಬಲಾರೆನಲ್ಲಾ!! ನಿಜವಾಗಿಯೂ ಈ ರಾಜ್ಯದಲ್ಲಿ ದೇವರು ಇದ್ದಾನೆಯೇ ? ಧರ್ಮವೆಂಬುದು ಇದೆಯೇ ??

ಆಲೋಚನಾತೀತವಾದ ಪ್ರಶ್ನೆ ಮನದಲೆಯಲ್ಲಿ ನಿಮಿರಿ ನಿಂತಿತು; ಆಶ್ಚರ್ಯ ವಿಶೇಷದಿಂದ ಪುನಃ ಪ್ರಶ್ನಿಸಿದ,

"ನೀನು ತಪ್ಪಾಗಿ ಭಾವಿಸದಿದ್ದರೆ ಒಂದು ಪ್ರಶ್ನೆ ಕೇಳಬೇಕೆಂದಿರುವೆ.... ನಿನಗೆ ಕೋಪ ಅಥವಾ ಬೇಸರ ಆಗಲಾರದು ಎಂಬ ನಂಬಿಕೆ ನನಗಿದೆ."

"ಪರವಾಯಿಲ್ಲ; ನೀನು ಏನು ಬೇಕಾದರೂ ಕೇಳಬಹುದು."

"ಒಂದು ವೇಳೆ ಪ್ರಶ್ನೆ ಅನುಚಿತವೆನಿಸಿದರೆ ದಯವಿಟ್ಟು ಕ್ಷಮಿಸು."

"ಚಿಂತೆಯಿಲ್ಲ....ಹೇಳು."

"ಈ ಚೀನೀ ರಾಜ್ಯದಲ್ಲಿ ದೇವರು ಇದ್ದಾನೆಯೇ? ಧರ್ಮವೆಂಬುದು ಇದೆಯೇ?"

ಒಂದೆರಡು ಗಳಿಗೆ ಸುಮ್ಮನಿದ್ದು ಅನಂತರ ಉತ್ತರಿಸಿದಳು ಚಿಯಾಂಗ್ ಚಿಂಗ್.

"ಈ ಪ್ರಶ್ನೆಗೆ ಇನ್ನೊಮ್ಮೆ ಉತ್ತರಿಸುವೆ. ಏಕೆಂದರೆ ಇದಕ್ಕೆ ಸವಿಸ್ತಾರವಾದ ಉತ್ತರವನ್ನು ಕೊಡದಿದ್ದಲ್ಲಿ ಪ್ರಶ್ನೆ ಅಥವಾ ವಿಷಯ ಅಪೂರ್ಣವಾಗಿ ಉಳಿಯುತ್ತದೆ. ಇಂದು ನನಗೆ ಅಷ್ಟು ಬಿಡುವಿಲ್ಲ. ಇನ್ನೂ ನಾಲ್ಕಾರು ಮಂದಿಯ ಆರೈಕೆ ಮಾಡಬೇಕು. ಎಂದಾದರೂ ನಿನಗೆ ಖಂಡಿತ ಉತ್ತರಿಸುವೆ. ಆಗಬಹುದೇ....?"

"ಅಚ್ಛಾ! ಆಗಬಹುದು."

* * * *

ಇಂದು, ಚಿಯಾಂಗ್-ಚಿಂಗ್ ಒಳಬಂದಾಗ ತುಂಬಾ ಬಳಲಿದಂತೆ ಕಂಡಳು. ಅವಳು ಔಷಧಿಯ ಟ್ರೇಯನ್ನು ಬಳಿಯಲ್ಲಿಟ್ಟುಕೊಂಡು ಸಹಾನಿಯ ಗಾಯದ ಕಟ್ಟುಗಳನ್ನು ಬಿಚ್ಚತೊಡಗಿದಳು. ಬ್ಯಾಂಡೇಜ್ ಅಲ್ಲಲ್ಲಿ ಅಂಟಿದ್ದುದರಿಂದ ಬಿಚ್ಚುವಾಗ ಅವರ್ಣನೀಯ ನೋವನ್ನು ಮೂಡಿಸಿದುವು. ಸಹಾನಿ ತಡೆಯಲಾರದೇ ಹಾ ಹೂ ಎಂದು ನರಳಿದ. ಒಮ್ಮೊಮ್ಮೆ ಸಿಟ್ಟು ನೆತ್ತಿಗೇರುವುದು. ಆದರೂ, ಸಹ ಆಕೆ ನಿರಪರಾಧಿನಿ. ನಿರ್ವಂಚನೆಯಿಂದ ಕಾರ್ಯತತ್ಪರೆಯಾಗಿದ್ದಾಳೆ..... ಅವಳ ಮೇಲೆ ಕೋಪಿಸಿಕೊಳ್ಳುವುದುಂಟೇ? ನನ್ನ ಗ್ರಹಚಾರಕ್ಕೆ ಅವಳೇನು ಮಾಡುತ್ತಾಳೆ?

"ದಯವಿಟ್ಟು ಕ್ಷಮಿಸು.....ಬ್ಯಾಂಡೇಜು ಅಂಟಿಬಿಟ್ಟಿರುವುದರಿಂದ ನೋವು ಮೂಡಿಯೇ ಮೂಡುತ್ತೆ."

ನುಡಿಯನ್ನು ಅನುನಯದಿಂದ ಹೊರಹಾಕಿ ನೀಳವಾದ ನಿಟ್ಟುಸಿರ್ಗರೆದಳು ಅವಳು.

"ನಿಜ; ಸಿಸ್ಟರ್ ತಪ್ಪು ನಿನ್ನದಲ್ಲ. ಎಲ್ಲಾ ನನ್ನ ಕರ್ಮ."

ತಾಮ್ರವರ್ಣ ರಂಜಿತ ಮುಖಬಿಂಬದಲ್ಲಿ ನೋವಿನ ಮುದ್ರೆ ಮೂಡಿತು.

ಅವಳು ಬಿಚ್ಚಿದ ಬ್ಯಾಂಡೇಜನ್ನು ಟ್ರೇ ಬದಿಯಲ್ಲಿಟ್ಟುಕೊಂಡು

ಡೆಟಾಲ್‌ನಿಂದ ಗಾಯಗಳನ್ನು ಶುದ್ಧಿಗೊಳಿಸಿ ಔಷಧಿ ಬಳಿದು ಅದೆ ಬ್ಯಾಂಡೇಜನ್ನು ಕಟ್ಟಲು ತೆಗೆದುಕೊಂಡುದುದನ್ನು ನೋಡಿ "ಸಿಸ್ಟರ್ ಇದನ್ನೇ ಎಷ್ಟು ಬಾರಿ ಕಟ್ಟದ್ದಿ! ಈ ಸಲಿ ಬೇರೆ ತೆಗೆದುಕೊ," ಎಂದ ಸಹಾನಿ.

"ನಮಗೆ ಬೇರೆ ಸಪ್ಲೈ ಇಲ್ಲವಲ್ಲಾ. ಏನು ಮಾಡಲಿ?"

"ಅದರ ಕೊಳಕು ನ್ಯೈ ಸೇರಿ ಇನ್ನಷ್ಟು ನಂಜಾಗುವುದಿಲ್ಲವೇ?"

"ನಾನು ನಿಸ್ಸಹಾಯಕಿ....." ಮ್ಲಾನವದನೆಯಾದಳು ಅವಳು.

"ಡಾಕ್ಟರು ಬಂದಾಗ ನಾನೇ ಕೇಳುವೆ...."

ಹಾಗೆಂದರೂ ಆ ಡಾಕ್ಟರು ಒದಗಿಸಲು ಸಮರ್ಥರಾದಾರೆಂಬ ನಂಬಿಕೆ ಯೇನೂ ಉಳಿದಿರಲಿಲ್ಲ. ಕಾರ್ಯತತ್ಪರೆಯಾದ ಅವಳನ್ನು ನೋಡುತ್ತ ವಿಷಾದವಾಣಿಯಲ್ಲಿ ನುಡಿದ "ನಮ್ಮಲ್ಲಿ ಯುದ್ಧ ಖೈದಿಗಳಿಗೆ ಅತ್ಯುತ್ತಮ ಚಿಕಿತ್ಸೆ ನೀಡುತ್ತಾರೆ. ಅತ್ಯಂತ ಕರುಣೆಯಿಂದ ಆರೈಕೆ ಮಾಡುತ್ತಾರೆ. ಇಲ್ಲಿ ಶ್ರದ್ಧೆ-ಪ್ರೀತಿ-ದಯೆಗಳು ಇಲ್ಲವೇ ಇಲ್ಲ. ಮಾನವೀಯತೆ ತುಂಬಾ ದೂರ."

ಅವಳ ಮುಖಬಿಂಬ ಖಿನ್ನವಾಯಿತು. ಮರುಮಾತಾಡದೆ ಹಳೆಯ ಬ್ಯಾಂಡೇಜನ್ನು ಬಿಗಿದಳು

"ದೀದೀ! ಬೇಸರಪಟ್ಟುಕೊಳ್ಳಬೇಡ. ನೀನು ನಿಸ್ಸಹಾಯಕಿ ಎಂಬುದು ಗೊತ್ತು."

ಅವಳು ಒಂದೇ ಮಾತಿನಲ್ಲಿ ತನ್ನ ಅಭಿಪ್ರಾಯವನ್ನೆಲ್ಲಾ ಹೊರ ಹಾಕಿದಳು,

"ನಿಮ್ಮವರು ಖಂಡಿತ ದಯಾವಂತರು!"

"ನೆರೆಹೊರೆಯುವರನ್ನು ನೋಡಿ ನಿಮ್ಮವರು ಪಾಠ ಕಲಿಯಬೇಕು."

"ಬಿಡಿ; ಅದು ಇನ್ನೊಂದು ಜನ್ಮಕ್ಕೆ!"

ಅವಳು ಬೆಳಗಿನ ವಂದನೆಯನ್ನು ಸಲ್ಲಿಸಿ ಹೊರಟು ಹೋದಳು. ಅದೇ ಪಾದರಕ್ಷೆಗಳ ಲರಕ್.....ಲರಕ್ ಸದ್ದು ಬಾಗಿಲಿಂದಾಚೆಯವರೆಗೆ ಹೋದುದನ್ನೂ ನಿಶ್ಯಬ್ದ ಗತಿಯಲ್ಲಿ ಆಲೈಸಿದ.

ಹೊರಗಡೆ ಅಂಗಣದಲ್ಲಿ ಅಂದಿನ ಕಾಮಗಾರಿಗಾಗಿ ಚೀನೀಯರನ್ನೂ ಭಾರತೀಯ ಯುದ್ಧ ಖೈದಿಗಳನ್ನೂ ಒಗ್ಗೂಡಿಸಿ ವ್ಯಾನುಗಳಿಗೆ ಹತ್ತಿಸುವ ಮಾತುಕತೆಯ ಸದ್ದು-ಗದ್ದಲ ಕೇಳಿಬರಹತ್ತಿತು.

ಚೀನೀ ದನಿಗಳು ದೇಶ ಭಕ್ತಿಗೀತೆಗಳನ್ನು ಹಾಡತೊಡಗಿದುವು. ಆ ಹಾಡು ಆ ದನಿ....ಕಿಂಚಿತ್ತಾದರೂ ಅರ್ಥವಾದರಷ್ಟೆ? ಅದು ಕಿವಿಗೆ ಬೀಳ ದಿದ್ದರೆ ವಾಸಿ ಎನಿಸುವಷ್ಟು ಕಿನಿಸಿಗೆ-ಜುಗುಪ್ಸೆ.

ವ್ಯಾನು ಭೊಂ ಭೊಂ! ಹಾರನ್ ಮಾಡುತ್ತಾ ಹೊರಟುದುದನ್ನು ಮುಚ್ಚಿದ ಬಾಗಿಲ ಕಂಡಿಯಿಂದ ನೋಡಿದ. ಎಷ್ಟೊಂದು ಮಂದಿ ಭಾರ ತೀಯ ಖೈದಿಗಳಿದ್ದಾರೆ? ಪಾಪ, ಎಂತಹ ಕಠಿಣ ಶಿಕ್ಷೆ?

ಹಿಂದೆಯೇ ಇನ್ನೂ ಕೆಲವು ವ್ಯಾನುಗಳು ಹೊರಟುವು. ಎಲ್ಲಾ ವ್ಯಾನುಗಳಲ್ಲೂ ಕೋವಿಗಾರರ ಗಸ್ತು ಮತ್ತು ಜಬರದಸ್ತು.

ಈ ಜನ ಸಮುದಾಯ ಏತರಿಂದ ಮಾಡಲ್ಪಟ್ಟಿದೆಯೋ ದೇವರಿಗೇ ಗೊತ್ತು. ಯುದ್ಧ ಖೈದಿಗಳು.....ಗಾಯಾಳುಗಳು....ಒಮ್ಮೆ ಇಲ್ಲಿಂದ ಬಿಡು ಗಡೆಯಾದರೆ ಸಾಕು.....ಅಂತರಾತ್ಮ ಗೀಳಿಟ್ಟಿತು.

* * * *

ದೂರ ದಿಗಂತದ ವ್ಯೋಮಮಂಡಲದ ನೀಲಿಯಮೇಲೆ ಅಸ್ತಮಾನ ರವಿ ಸುವರ್ಣ ಕಾಂತಿಯಲ್ಲಿ ರಂಜಿಸಿದ್ದ. ದಿಗ್ದೇಶವೆಲ್ಲಾ ರಾಗಾರುಣ ಕಾಂತಿ ಯಿಂದ ಮನೋಹರವಾಗಿದ್ದರೂ ಚಿತ್ತಕಲ್ಪ ಲಕ್ಷಿಸದಷ್ಟು ಜಡ ಅಥವಾ ಜುಗುಪ್ಸೆ ಅಥವಾ ಬೇಸರ ಅಥವಾ ಇನ್ನೇನೋ....ಅವೊಂದನ್ನೂ ರಮಿಸ ಲೊಲ್ಲದ ಮನಸ್ಸು.

ಸಹಾನಿ ಅದೇ ತಾಟಿನ ಮೇಲೆ ಕಾಲುಚಾಚಿ ಕುಳಿತಿದ್ದ. ಸೊಳ್ಳೆ-ನೊಣಗಳ ಕಾಟ ಬೇರೆ. ಜ್ವರದ ಕಾವು ಕಡಿಮೆಯಾಗಿದ್ದರೂ ಗಾಯಗಳ ನಂಜು ಪ್ರಾಣಕಣವನ್ನು ಅವ್ಯಾಹತವಾಗಿ ಹಿಂಡುತಿತ್ತು. ಹೇಗೆ ಮಲಗಿ ದರೂ, ಹೇಗೇ ಇದ್ದರೂ ಶರೀರಕ್ಕೆ ವಿಶ್ರಾಂತಿ ದೊರಕದು. ಮಗ್ಗುಲಿಂದ ಮಗ್ಗುಲಿಗೆ ಹೊರಳಿ ಮಲಗಲೂ ಸಾಧ್ಯವಾಗದು. ಯಾರಾದರೂ ಸ್ವಲ್ಪ ಸಹಾಯ ಮಾಡಿದರೆ ಎದ್ದು ಕೂಡಬಹುದು; ಎದ್ದು ನಿಲ್ಲುವೆನೆಂದರೆ ಜೀವ ಥರಥರ ನಡುಗುತ್ತದೆ. ಇನ್ನೊಬ್ಬರ ಸಹಾಯವಿಲ್ಲದಿದ್ದರೆ ಯಾವುದೂ ಸಾಧ್ಯವಿಲ್ಲ.

ಹೊರಗಡೆ ಕಾವಲುಗಾರರ ಮಾತುಕತೆ ಕೇಳಿಸುತ್ತದೆ. ನಗೆಚಾಟಿಕೆಯ

ಕೇಕಾರವ ಅಂತರಂಗವನ್ನು ತಟ್ಟುತ್ತದೆ. ಎದ್ದು ಹೋಗುವಂತಿದ್ದರೆ ಸಿಗಿದು ಬಿಡುತಿದ್ದೆ ಎಂಬ ರೋಷ..... ಅದರೆ ಅವರು ನಮ್ಮಂತೆಯೇ ಸರಕಾರೀ ನೌಕರರು. ಅವರವರ ಕರ್ತವ್ಯವನ್ನು ನಿರ್ವಹಿಸುವ ಕಾರ್ಮಿಕರು. ಅವರ ಮೇಲೆ ಸಿಟ್ಟುಗೊಳ್ಳುವುದರಿಂದ ಮಾಡುವುದೇನು ? ಎಂದು ತನಗೆ ತಾನೇ ಸಮಾಧಾನಪಟ್ಟುಕೊಳ್ಳುತ್ತಿರುವಾಗಲೇ ಬಾಗಿಲ ಕೀಲಿ ತೆರೆದ ಕಟಕಟ ಸದ್ದು ಕೇಳಿ ಬಂತು. ನೋಟ ಅತ್ತ ಹರಿಸಿದ ಸಹಾನಿ. ತೆರೆದ ಬಾಗಿಲಿಂದ ಬೆಳಕು ನುಗ್ಗಿ ಬರುವುದರೊಂದಿಗೆ ವೈದ್ಯ ಚಿಯಾಂಗ್ – ಚಿಂಗಳೊಂದಿಗೆ ಒಳ ಹೆಜ್ಜೆಯಿಟ್ಟ. ಅವಳ ಕೈಯಲ್ಲಿದ್ದ ಔಷಧಿಗಳ ಟ್ರೇ ಜಿಣಿ ಜಿಣಿ ಸದ್ದು ಮಾಡಿತು.

ವೈದ್ಯನನ್ನು ನೋಡುತ್ತಲೂ ಸಹಾನಿಯ ಮನಸ್ಸು ಕಿಂಚಿತ್ ಅರಳಿತು.

“ಹೇಗಿದ್ದೀ ...ಸಹಾನಿ ?”

“ಹಾಗೇ....ಏನೇನೂ ಉತ್ತಮವಿಲ್ಲ. ಇನ್ನೂ ಗಾಯಗಳು ಮಾಯ ಲಿಲ್ಲ. ಜ್ವರದ ಕಾವು ಸ್ವಲ್ಪ ಕಡಿಮೆಯಾಗಿದೆ. ನಿನ್ನೆ-ಮೊನ್ನೆ ನೀವು ಬರ ಲಿಲ್ಲವಲ್ಲಾ ?”

“ಬಿಡುವಾಗಲಿಲ್ಲ.”

ಭಾರತ ಸರಕಾರದಿಂದ ಯಾವ ನಿರೂಪವೂ ಬರಲಿಲ್ಲವೇ ಡಾಕ್ಟರ್?” ಕಾತರತೆಯಿಂದ ಪ್ರಶ್ನಿಸಿದ.

“ಇಲ್ಲಪ್ಪಾ.”

ಸಹಾನಿಯ ಮುಖ ಬಣ್ಣಗೆಟ್ಟಿತು. ಅರಳುಗಂಗಳಲ್ಲಿ ದೈನ್ಯಭಾವ ಮೊಳೆಯಿತು.

ಡಾಕ್ಟರ್ ದೈಹಿಕ ಪರೀಕ್ಷೆ ನಡೆಸಿದನಂತರ ಇಂಜಕ್ಷ್ ಕೊಡಲು ಸಿರಂಜ್ ಸಿದ್ಧಗೊಳಿಸಿದ. ನರ್ಸ್ ನೀರಿನ ಸಹಿತ ಮಾತ್ರೆಯನ್ನು ತೆಗೆದು ಟ್ರೇಯಲ್ಲಿಟ್ಟಳು. ಇಂಜಕ್ಷ್ ಕೊಟ್ಟ ನಂತರ ಡಾಕ್ಟರ್ ಸಮಾಧಾನದಿಂದ ನುಡಿದ,

“ಇನ್ನು ಪರವಾಯಿಲ್ಲ.....ಅಂದಿಂದಿಗೂ ಎಷ್ಟೋ ಸುಧಾರಿಸಿದ್ದಿ. ಗಾಯಗಳು ಗುಣವಾದರೆ ಮುಗಿಯಿತು.”

ಸಹಾನಿಯ ಸಹನೆ ಮೀರಿತು. ಮೈಯಲ್ಲಾ ಉರಿಯುವಷ್ಟು ಕೋಪ-

ಗಂಟಲು ಒಣಗುತಿದ್ದರೂ ಸಂಕಟಾವೇಗದಿಂದ ಚೀರಿದ "ರೆಡ್‌ಕ್ರಾಸ್ ಸಂಸ್ಥೆ ನಮಗಾಗಿಯೇ ನಿನ್ನನ್ನು ನೇಮಿಸಿ ಪಗಾರ ಕೊಡುತ್ತಿದೆ. ನೀನಿಲ್ಲಿ ಒಂದು ಗಳಿಗೆಯೂ ನಿಲ್ಲಲಾರೆ. ನಾಟಕೀಯವಾಗಿ ವಿಚಾರಿಸಿಕೊಳ್ಳುತ್ತಿ. ನನ್ನನ್ನು ಆಸ್ಪತ್ರೆಗಾದರೂ ಸೇರಿಸು. ಮಲಗಲು ಇಲ್ಲೊಂದು ತಡಿಯೂ ಇಲ್ಲ. ಎದ್ದು ಕೂಡುವ ತ್ರಾಣವಿಲ್ಲವಾಗಿ ಬಿದ್ದಿರುವುದು ಅನಿವಾರ್ಯ!"

ಅವನು ಈ ಬಗೆಯ ಪ್ರತಿಕ್ರಿಯೆಯನ್ನು ನಿರೀಕ್ಷಿಸಿರಲಿಲ್ಲವಾದುದರಿಂದ ಒಂದೆರಡು ಕ್ಷಣ ತಬ್ಬಿಬ್ಬಾಗಿ ನುಡಿದ "ಇಂದಿನ ಪರಿಸ್ಥಿತಿಯಲ್ಲಿ ಇದಕ್ಕಿಂತ ಹೆಚ್ಚಾಗಿ ಏನೂ ಮಾಡಲಾರೆ. ನಾನು ಠಾಣ್ಯದಿಂದ ಠಾಣ್ಯಕ್ಕೆ ಸುತ್ತಬೇಕು. ಆಸ್ಪತ್ರೆಯಲ್ಲಿ ಒಂದು ಇಂಚು ಜಾಗವೂ ದೊರೆಯುವಂತಿಲ್ಲ. ನಾನು ಹೇಗೆ ಸೇರಿಸಲಿ ನಿನ್ನ?"

"ಹೇಗಾದರೂ ಸ್ವಲ್ಪ ಉಪಕಾರ ಮಾಡು."

"ನಾನೊಬ್ಬ ಸಾಮಾನ್ಯ ಡಾಕ್ಟರು....ಇದಕ್ಕಿಂತ ಇನ್ನೇನು ಮಾಡಬಲ್ಲೆ? ಈ ರಾಜ್ಯದಲ್ಲಿ ನನ್ನ ಮಾತು ನಡೆಯುವುದುಃ ಸಾಧ್ಯವೇ? ಇದನ್ನೆಲ್ಲಾ ನೀನೇ ವಿಚಾರ ಮಾಡಿ ನೋಡು."

ಸೈನಿಕ ಮಾತಾಡಲಿಲ್ಲ. ದುಃಖ-ಸಂಕಟಗಳ ವಶೀಭೂತನಾದಂತೆ ಸುಮ್ಮನಾದ. ಅವನ ತೀರಾ ದೈನ್ಯಸ್ಥಿತಿಯನ್ನು ಗಮನಿಸಿ ಡಾಕ್ಟರೆಂದ "ನೀನು ಬಹಳ ಸೂಕ್ಷ್ಮ. ಸೈನಿಕನಾದವನಿಗೆ ತಾಳ್ಮೆಯಿರಬೇಕು. ಇಷ್ಟೊಂದು ಎದೆಗೆಟ್ಟರೆ ಹೇಗೆ ಹೇಳು. ಇಲ್ಲಿಯ ಆಸ್ಪತ್ರೆಗಳಲ್ಲಿ ಚೀನೀ ಸೈನಿಕರೇ ತುಂಬಿಹೋಗಿದ್ದಾರೆ. ಮೊದಲು ಚೀನೀಯರಿಗೆ ಪ್ರಾಧಾನ್ಯತೆ; ಅನಂತರ ಇತರರಿಗೆ."

ಅವರ ಸಂಭಾಷಣೆಯನ್ನು ಗಮನಿಸುತಿದ್ದ ಚಿಯಾಂಗ್-ಚಿಂಗ್ ಒಂದೆರಡು ಕ್ಷಣ ಸುಮ್ಮನಿದ್ದು ಅನಂತರ ನುಡಿದಳು "ದೇಶದಲ್ಲಿ ಪರಿಸ್ಥಿತಿ ತೀರ ಹದಗೆಟ್ಟಿರುವುದರಿಂದ ಕನಿಷ್ಠ ಜೀವನಕ್ಕೆ ಸಿದ್ಧವಾಗುವುದೇ ಮಾನವೀಯತೆಯ ಲಕ್ಷಣ. ನೀನು ಶೀಘ್ರ ಕೋಪಗೊಂಡರೆ ಡಾಕ್ಟರು ಏನು ಮಾಡಿಯಾರು? ಇಂಥಾ ಇನ್ನೂ ಹಲವಾರು ಶಿಬಿರಗಳಿಗೆ ಹೋಗಬೇಕು. ಅಲ್ಲಿರುವವರೆಲ್ಲಾ ಭಯಂಕರ ಗಾಯಾಳುಗಳು. ಈಗ ಈ ಮಾತ್ರೆ ತೆಗೆದುಕೊ.... ಅನಂತರ ಬಂದು ಗಾಯಕ್ಕೆ ಮದ್ದು ಬಳಿವೆ."

ಸಹಾನಿ ತಲೆಯಾಡಿಸಿ 'ಆಗಬಹುದು' ಎಂದು ಸೂಚನೆ ಕೊಟ್ಟ.

* * * *

ಚಿಯಾಂಗ್-ಚಿಂಗ್ ಒಳಹೆಜ್ಜೆಯಿಟ್ಟಾಗ ಸಹಾನಿ ಅತ್ತಲೇ ದೃ ಯಿಟ್ಟು ನೋಡಿದ.

ಕಾವಲುಗಾರ ಅವಳೊಡನೆಯೇ ಒಳಬಂದು ಸೈನಿಕನ ಸ್ಥಿತಿಗತಿಯನ ಗಮನಿಸಿ ನುಡಿದ "ಪರವಾಯಿಲ್ಲ. ಈಗೀಗ ಎಷ್ಟೋ ಗುಣವಾಗಿರುವ ಎದ್ದು ಇಲ್ಲಿಯೇ ಸ್ವಲ್ಪ ಓಡಾಡು!"

"ಓಡಾಡಬಹುದಿತ್ತು.....ನೆತ್ತರು ಬಸಿದ ಮೈಗೆ ತ್ರಾಣ ಕೂಡಿಬ ಲಿಲ್ಲ," ಎಂದಳು ಚಿಯಾಂಗ್-ಚಿಂಗ್.

ಸೈನಿಕ ಏನೋ ಹೇಳಲು ಬಯಸಿ ಸುಮ್ಮನಾದ. ಪ್ರಯತ್ನಿಸಿದರು ಉಸಿರು ಹೊರಡಲಿಲ್ಲ.

ಅವಳು ಗಾಯಗಳಿಗೆ ಮದ್ದು ಬಳಿದು ವಿಟಮಿನ್ ಮಾತ್ರೆಯನ್ನು ಕೊಟ್ಟು ನುಡಿದಳು,

"ನೀನು ತುಂಬಾ ನಿಶ್ಶಕ್ತಿಯಾಗಿದ್ದಿ. ಆಸ್ಪತ್ರೆಗೆ ಸೇರಿಸೋಣವೆಂದು ಎಷ್ಟೆಷ್ಟು ಪ್ರಯತ್ನಿಸಿದರೂ ಆಗಲಿಲ್ಲ. ಹೋಗಲಿ, ಬಿಡು ಇನ್ನೇನು ಇಷ್ಟ ರಲ್ಲೇ ಭಾರತ ಸರಕಾರಕ್ಕೂ ಚೀನೀ ಸರಕಾರಕ್ಕೂ ಒಪ್ಪಂದವಾಗಲಿದೆ..... ಅಂದರೆ, ಬೇಗನೆ ಬಿಡುಗಡೆ ಹೊಂದಿ ಭಾರತಕ್ಕೆ ಹಿಂದಿರುಗುತ್ತಿ.. ಇದು ನಿಜಕ್ಕೂ ಶುಭ ಸಮಾಚಾರ!"

"ಅಯ್ಯೋ, ಈ ಮಾತನ್ನು ಎಷ್ಟು ದಿನಗಳಿಂದ ಕೇಳುತ್ತಿರುವೆ? ಇನ್ನೂ ಒಪ್ಪಂದವಾಗುವುದರಲ್ಲೇ ಇದೆ. ಇದು ಪೂರ್ತಿಗೊಳ್ಳುವುದು ಬಹುಶಃ ನಾವು ಸತ್ತಮೇಲೆ!"

"ಹುಶ್! ಹಾಗೆನ್ನಬೇಡ ಸಧ್ಯದಲ್ಲೇ ಎಂದರೆ ಒಂದು ವಾರದೊಳ ಗಾಗಿ ಒಪ್ಪಂದವಾಗಿ ಯುದ್ಧಖೈದಿಗಳ ವಿನಿಮಯವಾಗಲಿದೆ. ದಯವಿಟ್ಟು ಚಿಂತೆ ಮಾಡಬೇಡ."

ಕಾವಲುಗಾರ ದೊಡ್ಡ ಬಾಯಿ ತೆರೆದು "ಹೌದಯ್ಯಾ, ಹೌದು..... ಇನ್ನು ಎಲ್ಲಾ ಸರಿಹೋಗುತ್ತೆ!" ಎನ್ನುತ್ತ ಹೊರಹೋದ. ಚಿಯಾಂಗ್-

ಚೆಂಗ್ ಅವನಿಗೆ ಎದ್ದು ನಿಲ್ಲಲು ಸಹಾಯ ಮಾಡಿ, ಅವನು ಉಡುಪುಗಳನ್ನು ಬದಲಿಸಿದ ನಂತರ "ಈ ಕಿಟಕಿ ಸರಳುಗಳನ್ನು ಹಿಡಿದುಕೊಂಡು ಸ್ವಲ್ಪ ಹೊತ್ತು ನಿಂತುಕೊ. ಅನಂತರ ಹೀಗೆಯೇ ಸ್ವಲ್ಪ ಓಡಾಡು. ಸದಾ ಮಲಗಿದ್ದ ಜೀವಕ್ಕೆ ಸ್ವಲ್ಪ ಹಿತವೆನಿಸುತ್ತೆ."

"ನನಗೆ ಇಲ್ಲಿಗೇ ಒಂದು ಒಳ್ಳೆಯ ತಡಿಯನ್ನಾದರೂ ಒದಗಿಸು. ಈ ಒರಟು ತಾಟಿನ ಮೇಲೆ ಮಲಗಲಾರೆ. ನಮ್ಮನ್ನು ಈ ರೀತಿಯಲ್ಲಿ ದಂಡಿಸುವುದು ಸರಿಯೆ? ನಿಮ್ಮ ದೇಶದಲ್ಲಿ ಧರ್ಮಕರ್ಮ ಸ್ವಲ್ಪವೂ ಇಲ್ಲ ಬಿಡು."

ಅವಳು ಒಂದೆರಡು ಕ್ಷಣ ಸುತ್ತಮುತ್ತ ನೋಡಿ ಅಲ್ಲಿ ಯಾರೂ ಇಲ್ಲವೆಂಬುದನ್ನು ಖಚಿತಪಡಿಸಿಕೊಂಡು ನುಡಿದಳು "ಇಲ್ಲಿ ಕೇಳು! ನಾನು ಈವರೆಗೆ ನಿರ್ವಂಚನೆಯಿಂದ ನಿಮ್ಮವರ ಸೇವೆ ಮಾಡಿರುವೆ. ನಮ್ಮಲ್ಲಿ ಧರ್ಮಕರ್ಮಗಳು ಇಲ್ಲ ಎಂದೇನಿಲ್ಲ. ಕೇಳು! ನಿಮ್ಮಲ್ಲಿರುವಂತೆಯೇ ಚೀನಾದಲ್ಲಿಯೂ ದೇವರಿದ್ದಾನೆ. ಧರ್ಮವೆಂಬುದು ಖಂಡಿತ ಇದೆ. ಅದರ ಮೌಲ್ಯವನ್ನು ಕಂಡವರು ಮಾತ್ರ ವಿರಳ. ಪ್ರತಿಯೊಬ್ಬರ ಹೃದಯದಲ್ಲಿಯೂ 'ದೇವರು' ಎಂಬ ವಸ್ತು ಅಜ್ಞಾತ ರೂಪದಲ್ಲಿ ಹುದುಗಿಕೊಂಡಿದೆ. ಈಗಣ ಪರಿಸ್ಥಿತಿಯಲ್ಲಿ, ಅವನು ಯಾರ ಎದುರಿಗೂ ಮಾತಾಡಲಾರ, ಅಳಲಾರ, ಸಂಕಟಗೊಳ್ಳಲಾರ, ಮೂಕವೇದನೆಯಲ್ಲಿ ಹೊತ್ತುಗಳೆಯುವ..... ಯಾರೂ ಅವನನ್ನು ಅರ್ಚಿಸಲಾರರು; ಸೇವಿಸಲಾರರು; ಆದರೂ, ದೀನ ದುಃಖಿಗಳ ದಗ್ಧ ಹೃದಯದಲ್ಲಿ ಸೆರೆಸಿಲ್ಕಿ ದೀನರಿಗಾಗಿ ದುಃಖಿಸುವ..... ದೀನ ಜನರ ಆಕ್ರಂದನ-ಸಂಕಟ-ದುಃಖ-ಮೊರೆ ಇವುಗಳನ್ನು ಕೇಳುವನು ಬಾಯ್ದೆರೆಯಲಾರ. ಬಾಯ್ದೆರೆದರೆ ಅವನೂ ಸಹ ಕ್ರಾಂತಿಕಾರಿಗಳ ಕೈಗೆ ಸಿಕ್ಕಿ ನುಚ್ಚುನೂರಾದರೆ ಆಶ್ಚರ್ಯವಿಲ್ಲ....."

ಕಿವಿಗೊಟ್ಟು ಕೇಳಿದ ಸಹಾನಿ ಸಂಭ್ರಾಂತನಾದ. ಹೃದಯಮೃದಂಗ ಉದ್ಘೋಷಿಸಿತು "ಹರೇ! ರಾಂ!!"

ಅವಳು ಒಣಗಿದ ತುಟಿಗಳನ್ನು ನಾಲಿಗೆಯಿಂದ ಒರಿಸಿಕೊಂಡಳು. ಕಣ್ಣು, ಕೆನ್ನೆ, ಮೂಗುಗಳು ಚಂದನವೊರೆದಂತೆ ಕೆಂಪು ಕೆಂಪು ತಳೆದುವು. ಭಯಗ್ರಸ್ತ ನೋಟ ಒಮ್ಮೆ ಸುತ್ತಮುತ್ತ ಹರಿದಾಡಿ ಹಿಮ್ಮರಳಿತು. ಅವನಿಗೆ ಕೈಯಾಸರೆ ನೀಡಿ ಕುಳಿತುಕೊಳ್ಳಲು ಸಹಾಯ ಮಾಡಿದ ಅವಳು ಬಳಿಯಲ್ಲಿ

ಮಂಡಿಯೂರಿ ಕುಳಿತು ಅವನ ಕೈಯನ್ನು ಎರಡೂ ಕೈಗಳಿಂದ ಅದುಮಿ
ಹಿಡಿದು ಮುಂದುವರಿದಳು,

“ವೀರವರ! ಕೇಳು! ನಮ್ಮಲ್ಲಿ ದುಕ್ಕ-ದುಗುಡ-ಕಷ್ಟ-ಕಾರ್ಪಣ್ಯ-ಅನೀತಿ-ಅನ್ಯಾಯ-ಅನಾಚಾರಗಳ ತಳಹದಿಯಮೇಲೆ ಜನಜೀವನ ನಿರ್ಮಿಸಲ್ಪಟ್ಟಿದೆ. ಜನತತಿ ಇಷ್ಟೊಂದು ಸಂಕಷ್ಟಗಳಿಗೆ ಒಳಗಾದರೂ ಕ್ರಾಂತಿ ನಡೆಸುವುದು ಕಷ್ಟ. ಪ್ರತಿಯೊಂದು ಜೀವಿಗೂ ತನ್ನ ನೆರೆಹೊರೆಯವರೆಲ್ಲ ಸರಕಾರದ ಗೂಢಚಾರನಿರಬಹುದೆಂಬ ಭಯ-ಸಂಶಯ! ಅಂದಮೇಲೆ, ಪ್ರತಿಯೊಂದನ್ನೂ ಮೂಕವೇದನೆಯಿಂದ ಸಹಿಸಿಕೊಂಡಲ್ಲದೆ ಗತಿಯಿಲ್ಲ. ಎಲ್ಲಾದರೂ ಕ್ರಾಂತಿಯ ಕಿಡಿ ಸಿಡಿದರೆ ಸಾಕು, ನಿರ್ದಾಕ್ಷಿಣ್ಯವಾಗಿ ಮಟ್ಟ ಹಾಕುತ್ತದೆ ಸರಕಾರ. ಆ ಘೋರಾತಿಘೋರ ದೃಶ್ಯ ಕಾಲಧರ್ಮನನ್ನೂ ನಡುಗಿಸೀತು! ಚೀನಾದೇಶದ ಪ್ರತಿಯೊಂದು ಮಗುವಿಗೂ ಯುದ್ಧ ಸಲಕರಣೆಗಳಿಗೆ ಗುಲಾಮನಾಗಿರುವುದನ್ನು ಕಡ್ಡಾಯವಾಗಿ ಕಲಿಸಲಾಗುವುದು. ಕುಟುಂಬಿಗರು ಪರಸ್ಪರ ಮನಬಿಚ್ಚಿ-ಹೃದಯಬಿಚ್ಚಿ ಮಾತಾಡುವಂತಿಲ್ಲ. ಈ ನಾಡಿನ ಗಿಡಗೆಂಟೆಗಳನ್ನೂ, ಗಾಳಿಮೋಡಗಳನ್ನೂ ನಂಬಲಾಗದಷ್ಟು ಸಂಶಯ ಪಿಶಾಚಿಯಾಗಿದ್ದಾನೆ ಮನುಷ್ಯ. ನಾನು ಇಷ್ಟೆಲ್ಲ ನಿನಗೆ ಹೇಳಿದ ಮೇಲೆ, ಪರಿಸ್ಥಿತಿ ಹೀಗಿದ್ದೂ ನಿನಗೆ ಇಷ್ಟೊಂದು ಮಾತಾಡಲು ಯಾವ ಧೈರ್ಯ ಎಲ್ಲಿಂದ ಬಂತು ಎಂದು ನೀನು ಅಚ್ಚರಿ ಪಡಬಹುದು ಅಲ್ಲವೇ? ಇರಲಿ, ಅದನ್ನು ಇನ್ನೊಮ್ಮೆ ವಿವರಿಸುವೆ!”

ಅಷ್ಟು ಹೇಳಿದ ಚಿಯಾಂಗ್-ಚಿಂಗ್ ಅವನ ಹಣೆಗೆ ಹೂಮುತ್ತನೊತ್ತಿ ತನ್ನ ಕಾರ್ಯನಿಮಿತ್ತ ಅವಸರವಸರವಾಗಿ ಹೊರಟುಹೋದಳು. ಹಿಂದಿಲಿಂದ ಆಶ್ಚರ್ಯವಿಸ್ಮೃತನಯನದ್ವಯಗಳು ಅತ್ತಲೇ ನಿಟ್ಟಿಸಿದುವು. ಅವಳ ವಿಚಾರಧಾರೆ ಕರ್ಣಪಟಲಗಳ ಮೇಲೆ ಇನ್ನೂ ಮೊರೆಯುತ್ತಲೇ ಇತ್ತು. ಸಹಾನಿ ನೀಳವಾದ ನಿಟ್ಟುಸಿರು ಬಿಟ್ಟ.

* * * *

“ಹಾ! ದೇವರಿಗಾಗಿ ಮೆಲ್ಲಗೆ ಮಾತಾಡು!”

ಪಿಸು ದನಿಯಲ್ಲಿ ನುಡಿ ಹೊರಬಿತ್ತು. ಶಂಕಿತ ದೃಷ್ಟಿಯನ್ನು ಒಮ್ಮೆ

ಸುತ್ತ ಹರಿಯಬಿಟ್ಟು ನೋಡಿದಳು ಅವಳು. ಮುಂಗೈ ಗಾಯಕ್ಕೆ ಮದ್ದು ಬಳಿದು ಕಟ್ಟು ಬಿಗಿಯುತ್ತ ಭಾವನಾತ್ಮಕವಾಗಿ ನುಡಿದಳು "ನಾವು ಮನುಷ್ಯರಾಗಿ ಹುಟ್ಟಿಯೂ ನಮಗೆ ವಾಕ್ ಸ್ವಾತಂತ್ರ್ಯವಿಲ್ಲ."

"ಪ್ರಾರಬ್ಧಕರ್ಮ.....!"

"ಹಾಗೆಂದುಕೊಳ್ಳುವುದರಿಂದ ಏನು ಫಲ? ನಾನು ತೀವ್ರ ಪ್ರಗತಿಗಾಮಿ ಆದರೆ...."

"ಕಮ್ಯುನಿಸ್ಟ್ ಪ್ರಾಂತ....." ಮುಂದೆ ಮಾತು ಹೊರಡಲಿಲ್ಲ.

"ನರಕ....." ತುಟಿಕಚ್ಚಿ ಮುಂದೆ ಹರಿಯಲಿದ್ದ ವಾಕ್ಸರಣಿಯನ್ನು ಅಲ್ಲಿಗೆ ಅದುಮಿದಳು ಚಿಯಾಂಗ್-ಚಿಂಗ್.

ಸಹಾನಿ ಪ್ರಶ್ನಾರ್ಥಕವಾಗಿ ಅವಳನ್ನು ನಿಟ್ಟಿಸಿದ.

"ಕಿಂಚಿತ್ ಸುಳಿವು ಸಿಕ್ಕಿದರೆ ನಮ್ಮನ್ನು ಚಚ್ಚಿ ಸಾಯಿಸಿಬಿಟ್ಟಾರು!"

"ಹರೆ? ರಾಂ!!"

"ಅಷ್ಟೊಂದು ಆಶ್ಚರ್ಯವೇ?"

"ಚಚ್ಚಿ ಸಾಯಿಸುವ ಭಂಗವೇಕೆ? ಒಂದು ಬುಲೆಟ್ ಖರ್ಚು ಮಾಡಬಾರದೇ?"

"ಬುಲೆಟ್.....! ಹಾ! ಇಲ್ಲಿ ಪ್ರಾಣಕಿಂತ ಬುಲೆಟ್ಟಿನ ಬೆಲೆ ಹೆಚ್ಚು. ಯಾವುವೇ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ವಿನಾ ಬುಲೆಟ್ ಪ್ರಯೋಗಿಸುವಂತಿಲ್ಲ....ಯುದ್ಧ ಪ್ರಕರಣಗಳಲ್ಲಿ ಉಪಯೋಗವಾಗುತ್ತದೆ ಬುಲೆಟ್. ನಮ್ಮಂತಹವರನ್ನು ಸಾಯಿಸುವುದೆಂದರೆ ಕಲ್ಲೇ ಗತಿ!"

"ನಿಜವಾಗಿ?"

"ಹೌದು. ಇಲ್ಲಿ ಸಾಯಿಸುವ ಪ್ರಸಂಗ ಬಂದರೆ ಹೊಂಡಕ್ಕೆ ತಳ್ಳಿ ಕಲ್ಲಿಂದ ಚಚ್ಚುತ್ತಾರೆ!"

"ಅಯ್ಯೊ, ಪಾಪ!"

"ಈ ಘೋರ ಶಿಕ್ಷೆಯೇ ರೂಢಿ."

"ದೇವರು ನಿನ್ನನ್ನು ಕಾಪಾಡಲಿ! ನೀನು ತುಂಬಾ ಪರೋಪಕಾರಿ. ನಿನ್ನಂತಹವರು ಚೆನ್ನಾಗಿರಬೇಕು."

"ತುಂಬ ಥ್ಯಾಂಕ್ಸ್!"

ಕಣ್ಣುಗಳಲ್ಲಿ ಸಣ್ಣಗೆ ನೀರಾಡಿತು. ಕರವಸ್ತ್ರದಿಂದ ಮುಖವನ್ನು ಒರಿಸಿಕೊಂಡು ಮುಂದುವರಿದಳು, "ನನ್ನ ಹೃದಯದಲ್ಲಿ ಉಕ್ಕುವ ಮಹತ್ಪ್ರಳಯವನ್ನು ತಡೆಗಟ್ಟಿ ಹೇಳುವೆ ಕೇಳು ! ಚೀನಿಯರು ಅಳುತ್ತಾರೆಯೇ ? ಎಂದು ಹಿಂದೊಮ್ಮೆ ಭಾರತೀಯ ಖೈದಿಯೊಬ್ಬ ನನ್ನನ್ನು ಪ್ರಶ್ನಿಸಿದ್ದ. ಆಗ ಅವನಿಗೆ ಉತ್ತರಿಸಲಾಗಲಿಲ್ಲ. ಇಂದು ಉತ್ತರಿಸುವೆ ಕೇಳು ! ಚೀನಿಯರೂ ಅಳುತ್ತಾರೆ, ಕಂಬನಿ ಸುರಿಸುತ್ತಾರೆ. ಆದರೆ, ಯಾರ ಕಣ್ಣಿಗೂ ಬೀಳದಂತೆ ! ಎದೆಯ ಸುಯ್ಲಿನಲ್ಲಿ ನೀರಾವಿಯಾಗಿ ದುಃಖದ ಮಹಾಪೂರ ಹರಿಯುತ್ತದೆ. ಎದೆಯ ಮಿಡಿತ ಯಾರೂ ಅರಿಯದಂತೆ ರೋದಿಸುತ್ತದೆ. ಭಗವಾನ್ ಬುದ್ಧ ದೇವನ ನಾಡಿನಿಂದ ಬಂದವನಾದ ನಿನ್ನೊಡನೆ ನಮ್ಮ ಕಷ್ಟಸುಖಗಳನ್ನು ನಿವೇದಿಸಿ ಕೊಳ್ಳುವುದರಲ್ಲಿ ಹಿತವಿದೆ ; ಸಂವೇದನೆಯಿದೆ.

"ಭಾತೃಭಾವದಿಂದ ಹೇಳುವೆ ಕೇಳು ! ಯುದ್ಧರಂಗದಿಂದ ಹಿಮ್ಮರಳುವ ಗಾಯಾಳುಗಳ ಬಗ್ಗೆ ಗೌರವಾದರಗಳು ಇಲ್ಲವೇ ಇಲ್ಲ. ಅವರು ದುರಸ್ತಾಗದ ಸ್ಥಿತಿಯಲ್ಲಿದ್ದರೆ ಸಂಕಟವನ್ನು ನೋಡಲಾಗದೆ ಚುಚ್ಚಿ ಸಾಯಿಸಿ ಬಿಡುತ್ತಾರೆ. ದೀರ್ಘಾವಧಿ ನರಳಿ ಸಾಯುವುದಕ್ಕಿಂತ ಬೇಗನೆ ಸಾಯಲಿ ಎಂಬ ಆತ್ಯಂತಿಕ ಕರುಣೆ ಇದಕ್ಕೆ ಕಾರಣ. ಇಷ್ಟೊಂದು ಕಷ್ಟಕಾರ್ಪಣ್ಯಗಳಿಂದ ಕೂಡಿದ್ದರೂ ಜನಕೋಟಿ ದಂಗೆಯೇಳುವುದು ಸಾಧ್ಯವೇ ಇಲ್ಲ. ಎಲ್ಲಿ ಮೊಳಕೆ ಮೂಡಿದರೆ ಅಲ್ಲಿಯೇ ಸರ್ವನಾಶವಾಗುತ್ತದೆ. ಕಳೆದೆರಡು ದಶಕಗಳಿಂದ ನಾವು ಪಟ್ಟಿರುವ ಪಾಡು ದೇವರಿಗೇ ಸಂವೇದ್ಯ. ಭಾವನಾರಹಿತರಾಗಿ, ಲಜ್ಜಾಹೀನರಾಗಿ ನಿಸ್ಸತ್ವರಂತೆ ಬಾಳು ಮುಗಿಸುತಿದ್ದೇವೆ. ಟಿಬೆಟ್ಟಿನಲ್ಲಿ ಕಮ್ಯುನಿಸಂ ತಲೆಯೆತ್ತಿದಾಗ ಆದ ಗೊಂದಲವೆಷ್ಟು? ಬೌದ್ಧಾನುಯಾಯಿಗಳ ಬಲಿದಾನವೆಷ್ಟು ? ಮೂಲಧರ್ಮದಲ್ಲಿ ಲಾಮಾಗಳೊಡನೆ ತಿರಸ್ಕಾರ ಭಾವನೆ ಮೂಡಿಸಿ ಮುಗ್ಧ ಟಿಬೆಟ್ಟಿಯನ್ನರಿಗೆ ಕೊಟ್ಟ ಹಿಂಸೆಯೆಷ್ಟು ? ಕರುಣೆ–ದಯೆ ಎಂಬುದು ಕಿಂಚಿತ್ತಾದರೂ ಇದ್ದಿದ್ದರೆ ಹೀಗಾಗುತಿತ್ತೇ ?"

"ಟಿಬೆಟ್ಟಿನ ಇತಿಹಾಸವನ್ನು ಅಳಿಸಿ, ನಾಗರಿಕತೆಯನ್ನು ಮಟ್ಟಹಾಕಿ, ಉತ್ಸಾಹವನ್ನು ಮೊಳಕೆಯಲ್ಲೇ ಚಿವುಟಿ, ಸಂಘಶಕ್ತಿಯನ್ನು ಪಶುಗಳಿಗಿಂತಲೂ ಕೀಳಾಗಿ ಗಣಿಸಿ ಧ್ವಂಸ ಮಾಡಿದುದನ್ನು ಜಗತ್ತು ಕಾಣದೇ ? ಕೇಳು ! ನನ್ನ ಎದೆಯಳಲನ್ನು ಪೂರ್ಣ ಹರಿಯಬಿಟ್ಟು ಸ್ವಲ್ಪ ಹಗುರ ಮಾಡಿ

ಕೊಳ್ಳುವೆ....ತಮ್ಮ ರಂಗ ಮಂಚಕ್ಕೆ ಬರಲೊಪ್ಪದ ಮಾನವಂತ ಮಹಿಳೆಯರನ್ನು ಜೀವಂತ ಸುಟ್ಟು ಸೇಡು ತೀರಿಸಿಕೊಳ್ಳುತ್ತಾರೆ. ಹೆಣ್ಣೆಂಬುದು ಸ್ವಚ್ಛಂದ ಭೋಗ ವಸ್ತು. ಇವೆಲ್ಲಾ ಲೀಲಾ ಲೋಲುಪ್ತಿಯಲ್ಲಿ ನಡೆಯುತ್ತವೆ ; ಯಾರ ಅಡ್ಡಿ–ಆತಂಕ–ಆಕ್ಷೇಪಗಳು ಮೂಡುವುದಿಲ್ಲ....."

ಕಂಠವು ಗದ್ಗದವಾದುದರಿಂದ ವಾಕ್ಸರಣಿ ಅಲ್ಲಿಗೆ ತುಂಡುಗಡಿಯಿತು. ಹೃದಯ ಸಿಡಿದೊಡೆಯುವ ದಡಾಕಿಯಂತಾಗಿ ಮುಖ ಮಂಡಲ ನಸುಗೆಂಪು ತಳೆಯಿತು. ಏರಿ ಇಳಿಯುವ ಹೃದಯವನ್ನು ಎರಡೂ ಕೈಗಳಿಂದ ಅದುಮಿ ಹಿಡಿದುಕೊಂಡು ಭಾವೋದ್ವೇಗದಿಂದ ನುಡಿದಳು "ವೀರವರ! ನಿಮ್ಮನ್ನೆಲ್ಲಾ ಸಂಧಿಸದಿದ್ದರೆ ಮಾನವ ಜೀವನದ ಹುರುಳು ಪ್ರಾಯಶಃ ನನಗೆ ತಿಳಿಯುತ್ತಿರಲಿಲ್ಲವೇನೋ. ಇಲ್ಲಿರುವ ಹಲವು ಭಾರತೀಯ ಸಂಸಾರಗಳನ್ನೂ, ಇಂಗ್ಲೀಷ್ ಸಂಸಾರಗಳನ್ನೂ ನೋಡಿದ ಮೇಲೆ ನಮ್ಮವರ ಬಗ್ಗೆ ನನಗೆ ಅತ್ಯಂತ ದುಃಖವಾಗುತ್ತದೆ....ಶತ್ರುವಾದ ನಿನಗೆ ಇದನ್ನೆಲ್ಲಾ ಏಕೆ ಹೇಳುತಿದ್ದೇನೆಂಬುದು ಆಶ್ಚರ್ಯವಾಗಲೂ ಬಹುದು. ನನಗೆ ಬುದ್ಧನ ನಾಡಿನವರಾದ ನಿಮ್ಮಲ್ಲಿ, ಅಪಾರವಾದ ಗೌರವವಿದೆ. ಆದ್ದರಿಂದ ಹೃದಯ ಸಂಪುಟವನ್ನು ಬಿಚ್ಚಿ ನಿಮ್ಮ ಮುಂದೆ ಇಟ್ಟಿರುವೆ. ಭಾರತ ವೀರನೇ! ನಾನು ಬಂದು ಬಹಳ ಹೊತ್ತಾಯಿತು. ಇನ್ನೊಮ್ಮೆ ಸಮಯ ದೊರೆತಾಗ ಹೇಳುವೆ ; ನೀನು ಲಜ್ಜಾಹೀನೆ ಎಂದು ಕೊಳ್ಳುವೆಯೇನೋ.....ಆದರೂ, ಪರವಾಯಿಲ್ಲ.....ನಾನಿನ್ನು ಬರುವೆ."

ಸ್ನೇಹಭಾವದಿಂದ ಹಸ್ತಲಾಘವ ನೀಡಿ, ಕರವಸ್ತ್ರದಿಂದ ಕಣ್ಣು ಮುಖಗಳನ್ನು ತೀಡಿಕೊಂಡು ಹೊರಟಳು ಚಿಯಾಂಗ್–ಚಿಂಗ್. ಭಾರವಾದ ಹೃದಯವನ್ನು ಹೊರಲಾರದೇ ಹೊತ್ತ ದೇಹ ಬಳುಕಿತೇನೋ..... ಹೆಜ್ಜೆಗಳು ತೊಡರಿದುವು.

* * * *

ಚೀನೀ ಕಟ್ಟಾಳುಗಳು ಆಗಲೇ ಕೂಳಿನ ತಟ್ಟೆಗಳನ್ನು ಟಕಟಕನೆ ಎಸೆದು ಹೋಗಿದ್ದರು. ಮುಗ್ಗುಲಕ್ಕಿಯ ಪರಾತ.....ತರಕಾರಿಯ ಹಾಳು ವ್ಯಂಜನ. ಅದಕ್ಕೊಂದು ರುಚಿಯೂ ಇಲ್ಲ. ದೇಹ ಪೋಷಣೆಯ ಭಾರವಿಲ್ಲದಿದ್ದರೆ-ಹಸಿವೆಯ ಪೀಳಿಲ್ಲದಿದ್ದರೆ ಮುಟ್ಟದೆ ಇರಬಹುದಾಗಿತ್ತು. ಆದರೆ,

ಗತ್ಯಂತರವಿಲ್ಲ. ಹಸಿವು ಹಿಂಗದಾಗ ಕೈ ಚೀಪುವ ಸೈನಿಕರ ಕರುಣಾಜನಕ ದೃಶ್ಯ ಕರುಳ ಬಳ್ಳಿಯನ್ನು ಮಿಡಿಸುತ್ತದೆ. ಆ ಎಲುಬಿನ ಹಂದರಗಳು..... ಆ ಪರಾತ.....ಆ ಭಯಾನಕ ಬಂಧನ.....ಕಲ್ಲನ್ನೂ ಕರಗಿಸುವಂತಹ ಕರುಣಾಯಿತ ಚಿತ್ತಾರ !

ಧಿಕ್ ! ಸ್ವಾರ್ಥ–ಲೋಭ–ಮದ–ಮಾತ್ಸರ್ಯಗಳ ಸಂಘರ್ಷಣೆ !

ಫಲಶ್ರುತಿ ಸಾವು-ನೋವು-ದುಃಖ-ದುಗುಡ.

ಸಹಾನಿ ಕಣ್ಣ ಕಿಂಡಿಯಲ್ಲಿ ಕಣ್ಣಿಟ್ಟು ನೋಡುತ್ತ ನಿಂತ. ಭಾರವಾದ ಹೃದಯ, ಭಾರವಾದ ಶರೀರ, ಭಾರ ಭಾರವಾದ ಹೆಜ್ಜೆಗಳು. ಅರ್ಥಾತ್ ಉಸಿರಿನ ಚಾಲನೆಯೂ ಭಾರವೇ !

ನಿರ್ಬಂಧಿತ ಜನವಾರ್ಧಿ....ಜಲಮಲಗಳ ದುರ್ಗಂಧ.....ತನುಮನಗಳ ಅಸ್ವಾಸ್ಥ್ಯ. ಎಂದಿಗೆ ಈ ಕರ್ಮಕಾಂಡ ಮುಗಿಯುವುದೋ ಎಂದು ಘೀಳಿಡುತ್ತವೆ ಮನಃಪ್ರಾಣಗಳು. ಮುಚ್ಚಿದ ಬಾಗಿಲಿನ ಒಳಿ ಪದಾಘಾತ ಕೇಳಿ ಬರುತ್ತಲೂ ಅದು ಚಿಯಾಂಗ್–ಚಿಂಗಳದೇ ಎಂದು ಗುರುತಿಸಿದ ಸಹಾನಿ. ಅವಳು ಬಾಗಿಲಿನ ಕೀಲಿ ತೆಗೆದು ಒಳಬಂದಳು. ರೂಕ್ಷ ತುಟಿಗಳಲ್ಲಿ ಕಿರುನಗೆ ಮಿನುಗಿ ಮಾಯವಾಯಿತು. ಮುಖದಲ್ಲಿ ಗೆಲುವಿರಲಿಲ್ಲ; ಏನೋ ಒಂದು ಬಗೆಯ ಅಶಾಂತಿಯ ಅವತರಣ. ಸಹಾನಿ ಅವಳನ್ನು ಗಮನಿಸಿ ನೋಡಿದ.

"ಏಕೋ ಒಂದು ರೀತಿಯಾಗಿದ್ದಿ....ಏಕೆ ? ಆರೋಗ್ಯವಿಲ್ಲವೇ ?"

"ಆರೋಗ್ಯ ಕೆಟ್ಟರೆ ವ್ಯಸನವಿಲ್ಲ. ಅದು ಸಣ್ಣ ವಿಚಾರ."

"ಅನಾರೋಗ್ಯ ಸಣ್ಣ ವಿಚಾರವೇ ?"

"ಈ ನಾನಾ ಕಿರಿಕಿರಿಗಳಿಗಿಂತ ಅದು ಹೆಚ್ಚಲ್ಲ."

"ಹಾ....!"

"ಈ ದೇಶದಲ್ಲಿ 'ದೀನೋದ್ಧಾರ' ಎಂಬ ಸೊಲ್ಲೇ ಇಲ್ಲ. 'ದೀನ ಮರ್ದನ' ಎಂಬುದು ಪ್ರಾಧಾನ್ಯ. ಅಂದಮೇಲೆ ನಾವು ಹೇಳಿಕೊಳ್ಳುವುದು ಯಾರಲ್ಲಿ ?"

"ಏಕೆ ? ಅಂತಹ ಕಷ್ಟವಾದರೂ ಏನು ?"

"ತುಟಿ ಮೀರಿದರೆ ದುಷ್ಟ ಪ್ರವೃತ್ತಿಯ ಪಟ್ಟಿಗೆ ಸೇರಿಸುವುದು ಸತ್ಯ.

ಅಂದರೆ ಕಠಿಣ ಶಿಕ್ಷೆ. ನಾನು ನಿನ್ನೊಂದಿಗೆ ಅಂದು ತುಂಬ ಮಾತಾಡಿರುವೆ. ನಿಮ್ಮವರ ರೀತಿ ನೀತಿಗಳಲ್ಲಿ ಜಗತ್ ಶಾಂತಿಯ ಮೇಲೆ ಅಪಾರವಾದ ಆಸ್ಥೆಯೆಂಬುದು ಗೊತ್ತು. ನಿಮ್ಮವರ ವಿಶ್ವಾಸಗಳಿಸಿದರೆ ಟಿಬೆಟ್ಟನಲ್ಲಿ ಮಾತ್ರವಲ್ಲ; ಚೀನದಲ್ಲೂ ಜನಹಿತ ಸಾಧನೆಯಾಗಿ ಶಾಂತಿ ನೆಲೆಸೀತೆಂಬ ನಂಬಿಕೆಯಿದೆ. ಅದರಿಂದ ನಮ್ಮಂತಹ ಅಬಲೆಯರ ಆತ್ಮೋದ್ಧಾರ ಖಂಡಿತ ಆಗುವುದೆಂದು ಆಶಿಸುವೆ. ನಾನು ಭಾರತ ಚರಿತ್ರೆಯನ್ನು ಬಹಳಷ್ಟು ತಿಳಿದುಕೊಂಡಿರುವೆ. ಭಾರತ ಸೈನಿಕರು ಸೆರೆಸಿಕ್ಕಿದನಂತರ ಇನ್ನಷ್ಟು ಅರಿತುಕೊಳ್ಳುವ ಭಾಗ್ಯ ಲಭಿಸಿತು. ಬಹಳ ಹಿಂದೆ ಮಹಾತ್ಮಾಗಾಂಧಿಯವರನ್ನೂ ಪಂಡಿತ್ ಜವಹರಲಾಲರನ್ನೂ ಕಣ್ತುಂಬ ಕಾಣುವ ಯೋಗ ಈ ಪಾಮರಳಿಗೆ ಲಭಿಸಿತ್ತು. ಈಗಲೂ ಅದನ್ನು ನೆನೆನೆನೆದು ಹರ್ಷಿಸುವೆ.

"ಭಾರತೀಯರ ಭರತವಾಣಿಯನ್ನು ಕೇಳುವಾಗ ಟಿಬೆಟ್ಟಿನ ಚಂಬಾಗಳ ರಣಸಾಹಸ ಅಕ್ಷಿಪಟಲದ ಮೇಲೆ ನಲಿಯುತ್ತದೆ. ಭಾರತವು ತಮಗೆ ಪೂರ್ಣ ನೆರವು ನೀಡುವುದೆಂದು ಚಂಬಾಗಳ ನಂಬಿಕೆ. ಅಷ್ಟೇ ಅಲ್ಲ; ಭಾರತೀಯರು ಸಹಾಯ ಮಾಡಿದರೆ ನಾವೂ ಸ್ವತಂತ್ರ್ಯ ಪಡೆಯಬಹುದೆಂಬ ನಂಬಿಕೆ ಟಿಬೆಟ್ಟಿಯನರಿಗುಂಟು.

"ನೀವು ಧರ್ಮಕ್ಕಾಗಿ, ರಾಷ್ಟ್ರಕ್ಕಾಗಿ ಹೋರಾಡುತ್ತೀರಿ. ನಿಜವಾಗಿಯೂ ಅದರಲ್ಲಿ ಅರ್ಥವಿದೆ; ಮೋಕ್ಷವಿದೆ; ಆತ್ಮಶಾಂತಿಯಿದೆ; ಸಂತೃಪ್ತಿಯಿದೆ. ನಮ್ಮಂತೆ ಪಾಪ ಕರ್ಮಕ್ಕಾಗಿ, ಹೊಟ್ಟೆಯ ಪಾಡಿಗಾಗಿ ಎದೆಯ ಬೇಗೆಗಾಗಿ ಯುದ್ಧ ಹೂಡಲಿಲ್ಲ. ನಿಮ್ಮ ನಾಡಿನಲ್ಲಿ ಗಾಂಧೀಜಿಯವರ ಅವತಾರದಿಂದ ದೇಶ ಬಂಧವಿಮೋಚನೆಯಾಯಿತು. ಬ್ರಿಟಿಷರ ಕಪಿಮುಷ್ಟಿಯಿಂದ ಬಿಡುಗಡೆ ಹೊಂದಿದಿರಿ. ನಮ್ಮಲ್ಲೂ ಅಂತಹ ಪ್ರವಾದಿಯ ಅವತಾರವಾದರೆ.....? ಹೋಗಲಿ ಬಿಡು, ಎಂತಹ ಪ್ರವಾದಿಯನ್ನಾದರೂ ಈ ಕ್ರಾಂತಿಕಾರೀ ಪಡೆಗಳು ಉಳಿಸಲಾರವು. ಭಗವಾನ್ ಬುದ್ಧನ ಕಾಲದಲ್ಲಿ ಕ್ರಾಂತಿ ಪಡೆಗಳಿದ್ದಿದ್ದರೆ ಅವರ ಕತೆ ಏನಾಗುತಿತ್ತೋ.....!

"ಭಾರತ ಪುತ್ರನೇ! ಇಲ್ಲಿ ಕಿಟಕಿ-ಗೋಡೆ-ಬಾಗಿಲುಗಳೂ ಕೇಳಬಲ್ಲುವು; ಹೇಳಬಲ್ಲುವು. ಅವ್ಯಾಹತವಾಗಿ ಗೂಢಚರ್ಯೆ ನಡೆಯುತ್ತಿರುತ್ತದೆ.

ಈ ದುರದೃಷ್ಟಕರ ಧರ್ಮದಾರಿದ್ರ್ಯವನ್ನು ನಿನ್ನಂತಹ ಸುಪಾತ್ರರಿಗೆ ಅರುಹಿ ಹೃದಯವನ್ನು ಹಗುರ ಮಾಡಿಕೊಳ್ಳುವುದರಲ್ಲಿ ಯಮಗಂಡ ಒದಗಿದರೂ ಚಿಂತೆಯಿಲ್ಲ. ಭಗವಾನ್ ಬುದ್ಧದೇವ ನಮ್ಮನ್ನೊಮ್ಮೆ ರಕ್ಷಿಸಿದಂತೆ ಆತನ ಹೃಜ್ಯೋತಿಗಳಾದ ನೀವೂ ಸಹ ನಮ್ಮನ್ನು ರಕ್ಷಿಸಿರಿ ಎಂದು ನಮ್ರತೆಯಿಂದ ಕೇಳಿಕೊಳ್ಳುವೆ. ಚೀನಾ-ಟಿಬೆಟ್ಟುಗಳಾದ್ಯಂತ ಲಕ್ಷಾನುಲಕ್ಷ ಚಿಯಾಂಗ್-ಚಿಂಗರಿದ್ದಾರೆ. ಅವರುಗಳ ಉದ್ಧಾರವಾದರೆ ಜಗತ್ತು ಎಚ್ಚತ್ತುಕೊಳ್ಳುತ್ತದೆ. ಖಂಡಿತವಾಗಿಯೂ ಹೇಳುವೆ ಕೇಳು! ಇಂದು ಲಕ್ಷಾನುಲಕ್ಷ ದೀನೆಯರ ಉದ್ಧಾರ ಪುರುಷೋತ್ತಮರ ಕೈಲಿದೆ....."

ಸಹಾನಿ ತಲೆ ಬಾಗಿದ. ಕಣ್ಣುಗಳಿಂದ ಸ್ಥೂಲಸ್ಥೂಲ ಹನಿಗಳು ಕೆಳಗುರುಳಿ ಬಟ್ಟೆಯಲ್ಲಿ ಹಿಂಗಿ ಹೋದುವು. ಹೃದಯ ಬನದಲ್ಲಿ ಸಂತಾಪದ ಕಿಚ್ಚು ಧಗಧಗಿಸಿತು.

* * * *

ಪ್ರಾಂಗಣದಲ್ಲಿ ಮಾತಿನ ಮರ್ಮರ-ನಗೆಯ ಕಿಲಕಿಲ ಧ್ವನಿ ಒಮ್ಮಿಂದೊಮ್ಮೆಲೇ ಮೊಳಗಿತು. ಸಹಾನಿ ಅತ್ತ ಗಮನ ಕೊಡುವುದರೊಳಗಾಗಿ ಬಾಗಿಲ ಕೀಲಿಯನ್ನು ತೆಗೆದು ಹಿರಿಯ ಹೆಂಗಳೆಯರಿಬ್ಬರು ಒಳಗಡೆ ಹಣಿಕಿದರು. ಹೆಂಗಸರಿಗೂ ಅಲ್ಲದ, ಗಂಡಸರಿಗೂ ಅಲ್ಲದ ವಕ್ರ ಉಡುಪು. ಆರಡಿಯಷ್ಟು ಎತ್ತರ. ಸದೃಢವಾದ ಶರೀರ. ಹಳದಿಯ ಬಣ್ಣ. ಸಣ್ಣ ಸಣ್ಣ ಕಣ್ಣುಗಳ ವಿಕೃತ ರೂಪ. ಅವರು ಗಳಗಳ ಮಾತಾಡಿಕೊಳ್ಳುತ್ತಲೇ ಒಳ ಬಂದರು. ಗೆಜ್ಜೆ-ಸರಗಳನ್ನು ಅಲುಗಿಸಿದಂತೆ ಹಿರಿಯ ದನಿಯಲ್ಲಿ ಮಾತುಕತೆಯ ಮೋಜು.

ಒಬ್ಬಾಕೆ ಹೇಳಿದಳು "ಭಾರತ ಸರಕಾರಕ್ಕೂ ಚೀನೀ ಸರಕಾರಕ್ಕೂ ಯುದ್ಧಖೈದಿಗಳ ವಿನಿಮಯದಲ್ಲಿ ಒಪ್ಪಂದವಾಯಿತು. ನಾಳೆ ನಿಮ್ಮನ್ನೆಲ್ಲ ಬಿಡುಗಡೆ ಮಾಡಿ ಭಾರತಕ್ಕೆ ಕಳುಹಿಸಲಾಗುತ್ತದೆ!" ಸ್ವಚ್ಛ ಹಿಂದಿಯಲ್ಲಿ ವಿಷಯ ಹೊರಬಿತ್ತು.

ಸುದ್ದಿ ತಿಳಿದು ಸಹಾನಿಗಾದ ಆನಂದ ಅಷ್ಟಿಷ್ಟಲ್ಲ. ಹಸನ್ಮುಖಿಯಾಗಿ "ತುಂಬ ವಂದನೆಗಳು!" ಎಂದ. ದನಿಯಲ್ಲಿ ಆನಂದಾತಿರೇಕ ಸ್ಫುರಿಸಿ ಗಂಟಾರವದಂತೆ ಮೊಳಗಿತು ಧನಿ.

"ನಿನ್ನ ನಾಡಿಗೆ ಹೋದನಂತರ ನಮ್ಮನ್ನು ಜ್ಞಾಪಿಸಿಕೊಳ್ಳು ತ್ತೀಯಷ್ಟೆ?"

"ಖಂಡಿತ!"

ಒಪ್ಪಂದದ ಕರಡನ್ನು ಅವನಿಗೆ ಓದಿ ಹೇಳಿ ಅವರು ಹೊರಟರು. ಕಣ್ಣು ಕೆನ್ನೆಗಳಲ್ಲಿ ತುಂಟ ನಗೆ ನಲಿಯುತಿತ್ತು. ಕೊನೆಯ ಪ್ರಕರಣವಾಗಿ "ನೀನು ತುಂಬ ಒಳ್ಳೆಯುವ....ಸಹಕಾರ ನೀಡಿದ್ದಿ" ಎಂದರು.

ಅವನ ಮುಗುಳು ನಗೆಯೇ ಉತ್ತರವಾಯ್ತು.

ಅವರು ಹೊರಹೋಗುತ್ತಲೂ ಒಳಬಂದ ಚಿಯಾಂಗ್-ಚಿಂಗಳ ಮುಖ ಬಿಂಬ ಪರಿಮ್ಲಾನವಾಗಿತ್ತು.

ಸಹಾನಿ ಅನುನಯದಿಂದ ಪ್ರಶ್ನಿಸಿದ "ಸಿಸ್ಟರ್ ನಿನ್ನ ಮುಖವೇಕೆ ಬಾಡಿದೆ?"

ಆ ಪ್ರಶ್ನೆಯನ್ನು ಅವಳು ನಿರೀಕ್ಷಿಸಿರಲಿಲ್ಲವಾಗಿ ಸಿದ್ಧ ಉತ್ತರವೂ ಇರಲಿಲ್ಲ. ಒಂದೆರಡು ಗಳಿಗೆ ತಬ್ಬಿಬ್ಬಾದಂತೆ ಸುಮ್ಮನಾದಳು. ತುಟಿಗಳಲ್ಲಿ ಶುಷ್ಕನಗೆ ಮೂಡಿ ಮಾಯವಾಯಿತು. ಸಹಾನಿ ಅವಳನ್ನು ನೋಡುತ್ತ ಕುತೂಹಲವನ್ನು ಬೈತಿಟ್ಟುಕೊಳ್ಳಲಾರದೆ ಅಂದ "ಆ ಮುದುಕಿಯರು ಎಷ್ಟು ಸಂತೋಷವಾಗಿದ್ದಾರೆ? ಅವರೂ ಸಹ....."

ಮಾತು ಮುಗಿಯುವುದರೊಳಗಾಗಿ ಚಿಯಾಂಗ್-ಚಿಂಗ್ ನುಡಿದಳು.

"ಅವರು ಸರಕಾರೀ ಗೂಢಚಾರರು!"

ಆ ಮಾತು ಕೇಳಿ ಅವನು ಆಶ್ಚರ್ಯಚಕಿತನಾದ.

"ನನ್ನ ಗತಿ ಮುಗಿಯಿತು.....ಕಲ್ಲು ಹೊರುವ ಕೆಲಸಕ್ಕೆ ನನ್ನನ್ನು ಹಚ್ಚುತ್ತಾರೆ!"

"ಅದೇಕೆ?"

"ನಾನು ದುಷ್ಟಳೆಂದು ಸಾಬೀತಾಗಿದೆ!" ಗದ್ಗದ ಕಂಠದಿಂದ ನುಡಿ ಹೊರಬಿತ್ತು.

ಆ ಕೂಡಲೇ ಯಾವುದೋ ಅಗೋಚರ ಹಸ್ತ ಹೃದಯವನ್ನು ಹಿಸುಕಿದಂತಾಯಿತು. ಸಹಾನಿ ಸ್ತಂಭೀಭೂತನಾದ.

"ನಮ್ಮಲ್ಲಿ ಮನುಷ್ಯತ್ವವನ್ನು ಅರ್ಥಮಾಡಿಕೊಂಡವರು ಬಲುವಿರಳ. ಸರಕಾರದ ಅನುಯಾಯಿಯಾದವರಿಗೆ ತಿಳಿಯಹೇಳುವುದೂ ಕಷ್ಟವೇ."

ಪ್ರಯತ್ನಿಸಿದರೂ ತುಟಿಗಳು ಬಿರಿಯಲಿಲ್ಲ; ಮಂತ್ರಮುಗ್ಧತೆಗೂ ಮೀರಿದ ಭ್ರಾಮಕ ಸ್ಥಿತಿ.

"ನಮ್ಮ ಜೀವನ ಪಥ ಹರಿದಿರುವುದೇ ಕತ್ತಿಯಲುಗಿನ ಮೇಲೆ. ನಮಗೆ ಇದೇನೂ ಹೊಸದಲ್ಲ. ನೀನು ಹೇಗೂ ನಿನ್ನ ನಾಡಿಗೆ ಹಿಂದಿರುಗುವವನಿದ್ದಿ. ನಿನ್ನ ಸುಖ ಸಂತೋಷದ ಬೀಡಿನಲ್ಲಿ ನೆರೆನಾಡಿನವರಾದ ನಮ್ಮ ಸ್ಥಿತಿಯನ್ನು ಮರೆಯಲಾರೆ ಎಂದು ಭಾವಿಸುವೆ. ಕೊನೆಯ ಪಕ್ಷ ಈ ದೀನೆಯರ ನೆನಪು ನಿನ್ನ ಮನದಲ್ಲಿ ಚಿರಂತನವಾಗಿರಲಿ ಎಂಬುದು ನನ್ನ ಮಹದಾಶಯ. ಅಂತಲೇ ನನ್ನ ಯಮಗಂಡವನ್ನು ಎದುರಿಸಿ ನಮ್ಮ ಕರುಣಕತೆಯನ್ನು ನಿನ್ನ ಮುಂದಿಟ್ಟಿರುವೆ. ನಿನ್ನ ದೇಶದ ಪ್ರತಿಯೊಬ್ಬ ಪ್ರಜೆಗೂ ನಮ್ಮ ಸ್ಥಿತಿಗತಿಯನ್ನು ವಿವರಿಸಿ ಹೇಳು. ಲಕ್ಷಾನುಲಕ್ಷ ಚಿಯಾಂಗ್-ಚಿಂಗರ ಕಂಬನಿಯನ್ನು ತೊಡೆಯಲು ಪ್ರತಿಯೊಂದು ಮಗುವನ್ನೂ ಸಿದ್ಧಗೊಳಿಸು!"

ಸಹಾನಿ ನಿಸ್ತೇಜ ಮುಖದಿಂದ ನುಡಿದ "ನೀನು ಕ್ಷೇಮಂಕರೀ! ನೀನು ಎಷ್ಟು ಚೆನ್ನಾಗಿ ಆಕೈಕೆ ಮಾಡಿದ್ದಿ! ನೀನು ದುಷ್ಟಳಾಗುವುದು ಹೇಗೆ? ಭಗವಂತನಲ್ಲಿ ನಿನಗಾಗಿ ಪ್ರಾರ್ಥಿಸುವೆ. ಅವನು ನಿನ್ನನ್ನು ಕಾಪಾಡಲಿ!"

ಸಮಸ್ತ ಸ್ತ್ರೀಜಾತಿಯ ದುಃಖವನ್ನು ಒಮ್ಮೆಗೇ ಅರಿತುಕೊಂಡ ಸಹಾನಿ. ಅಂತಸ್ಥಲ ಬಿರಿಯುವಂತೆ ಭಾಸವಾಯಿತು. ದುಃಖಕ್ಲಾಂತ ದೃಷ್ಟಿಯಿಂದ ನೋಡಿದ.

"ಇದೇ ನಿನ್ನ–ನನ್ನ ಕೊನೆಯ ಭೇಟಿ. ಔಷಧಿ ನೀಡುವ ನೆವದಲ್ಲಿ ಬಂದೆ."

ಅವಳು ಆ ಕ್ಷಣವೇ ಹಸ್ತಲಾಘವ ನೀಡಿ ಹೊರಟು ಹೋದಳು. ಆ ಮುಗ್ಧಮುಖದ ಶೋಕಛಾಯೆ ಸುತ್ತಮುತ್ತ ದುಃಖರಾಗಗಳ ವರ್ತುಲಗಳನ್ನು ನಿರ್ಮಿಸಿತು.

ಸಹಾನಿ ಚಿಂತಾಕ್ರಾಂತನಾದ.

* * * *

ಪುಲಿನ ಕಣಗಳ ಮೇಲೆ ಹೊಳೆಯುತಿದ್ದ ಸೂರ್ಯಕಿರಣಗಳು ಹನಿಹನಿಯನ್ನೂ ಹೀರಿಕೊಂಡಿವೆ- ಶಾಣ್ಯದ ವಲಯದಲ್ಲಿ ಹಸುರಿನ ಹೆಸರೇ ಇಲ್ಲ. ಗಿಡಮರಗಳೆಲ್ಲಾ ಎಲೆಯುದುರಿ ಬರಲು ಬರಲಾಗಿ ನಿಂತಿವೆ. ಕಾಲಡಿಯ

ಹುಲ್ಲು ಸಹ ಪುಡಿಪುಡಿಯಾಗಿ ಮಣ್ಣಿನ ಹುಡಿಯೊಂದಿಗೆ ಬೆರೆಯುತ್ತಿವೆ.

ಸಹಾನಿ ಬಿಸಿಲಿನ ಬೇಗೆಯನ್ನು ತಡೆಯಲಾರದೆ ಹೊರ ಜಗತ್ತಿನೆಡೆಗೆ ದೃಷ್ಟಿಹಾಯಿಸಿ "ಈ ಬೋಳೇ ಚೀನೀಯರಿಗೆ ಗಿಡ ನೆಟ್ಟು ನೀರು ಹೊಯ್ಯುವ ಅಭ್ಯಾಸವೂ ಇಲ್ಲವೋ ಏನೋ....." ಎಂದುಕೊಂಡ.

ಹಳದಿ ವರ್ಣದ ವ್ಯಕ್ತಿಯೊಂದು ಆಳ್ತನಕ್ಕೆ ಮಿಾರಿದ ಮೈಯನ್ನು ಹೊತ್ತು ದೊಡ್ಡ ದೊಡ್ಡ ಹೆಜ್ಜೆಯಿಡುತ್ತಾ ಇತ್ತಲೇ ಬಂದಿತು. ಚಪ್ಪಟೆ ಮುಖಬಿಂಬದಲ್ಲಿ ಅಸಂಖ್ಯಾತ ರೇಖೆಗಳ ನಡುವೆ ಅರೆತೆರೆದ ಸಣ್ಣಸಣ್ಣ ಕಣ್ಣುಗಳು, ಬೆನ್ನ ಹಿಂದೆ ಜೋಲಾಡುವ ನಾಲ್ಕಾರು ಜಡೆಗಳು, ತಲೆಯ ಮೇಲೆ ಟೋಪಿ, ದೊಗಲೆ ಉಡುಪು, ಮಾಸಲು ಮೈ. ಪ್ರಪ್ರಥಮ ನೋಟಕ್ಕೆ ಜುಗುಪ್ಸೆ ಮೂಡುವಂತಹ ವಿಲಕ್ಷಣ ರೂಪ.....

ಸನಿಹಕ್ಕೆ ಬರುತ್ತಲೂ, ಅವನು ಹರುಕು ಮುರುಕು ಹಿಂದಿಯಲ್ಲಿ ನುಡಿದ,

"ಈಗ ಟ್ರಕ್ಕು ಬರಲಿದೆ."

"ಬಹಳ ವಂದನೆಗಳು !"

ಹೊರಡುವ ಮುನ್ನ ಚಿಯಾಂಗ್-ಚಿಂಗಳ ದರ್ಶನವಾಗದುದು ವ್ಯಸನಕರ. ಅವಳು ಎಷ್ಟೊಂದು ತಾಳ್ಮೆಯಿಂದ ಆರೈಕೆ ಮಾಡುತಿದ್ದಳು. ಸ್ವಲ್ಪವೂ ಬೇಸರವಿಲ್ಲದೆ ಕೆಲಸ ನಿರ್ವಹಿಸುತಿದ್ದ ಆಕೆ ನಿಜಕ್ಕೂ ಕ್ಷೇಮಂಕರೀ ! ಅಂತಹವಳಿಗೆ ಕಠಿಣ ಶಿಕ್ಷೆ! ಎಷ್ಟು ಅರ್ಥಹೀನ? ಈ ಜನ ಏಕೆ ಇಷ್ಟು ನಿಷ್ಠೂರ. ಅದೇ ಅರ್ಥವಾಗುತ್ತಿಲ್ಲ....ಎಂದು ತನ್ನಲ್ಲೇ ಯೋಚಿಸಿಕೊಂಡ.

ಅವನು ಪುನಃ ನುಡಿದ "ಎಂಟು ಟ್ರಕ್ಕುಗಳು ಸಿದ್ಧವಾಗಿವೆ. ಕೆಲಸಕ್ಕೆ ಹೋದವರನ್ನು ಕರೆತರಲು ಸಿಪಾಯಿಗಳು ಹೋಗಿದ್ದಾರೆ. ಅವರು ಬಂದೊಡನೆಯೇ ನಿಮ್ಮನ್ನು ಗಡಿಯವರೆಗೆ ಒಯ್ದು ಭಾರತ ರೆಜಿಮೆಂಟಿಗೆ ಒಪ್ಪಿಸಿದ ನಂತರ ಅಲ್ಲಿ ಸೆರೆ ಸಿಕ್ಕಿರುವ ನಮ್ಮವರನ್ನು ಹಿಂತೆಗೆದುಕೊಳ್ಳುತ್ತೇವೆ."

"ಸರಿ.....ಸರಿ."

ಅವನು ದೊಗಲೆ ಅಂಗಿಯ ಜೇಬಿನಲ್ಲಿ ಕೈಯಿಟ್ಟುಕೊಂಡು ಬಸಬಸ ಸದ್ದು ಮಾಡುತ್ತ ಹೊರಟ ಹಿಂದಿಲಿಂದ ಸಹಾನಿ ತಿರಸ್ಕಾರದ ನಗೆ ನಕ್ಕ !

ಸ್ವಲ್ಪ ಹೊತ್ತಿನೊಳಗಾಗಿ ಭಾರತೀಯ ಖೈದಿಗಳು ಹಿಂದಿರುಗಿದರು

ಮೈಕೈಯೆಲ್ಲಾ ಮಣ್ಣು. ಮಧ್ಯಾಹ್ನದ ಊಟವೂ ಇಲ್ಲ. ದೈಹಿಕವಾಗಿ ಬಳಲಿದ್ದರೂ ಮಾನಸಿಕವಾಗಿ ಖುಷಿಯಿಂದಿದ್ದರು. ಮೈಮುಖಗಳಿಲ್ಲಿ ಬಸಿಯುತಿದ್ದ ಬೆವರನ್ನು ಒರಿಸಿಕೊಳ್ಳಲು ಒಂದು ಕರವಸ್ತ್ರವಾದರೂ ಇದ್ದರಷ್ಟೆ? ಬಳಿಯಲ್ಲಿ ಏನೇನಿತ್ತೊ ಅದೆಲ್ಲಾ ಚೀನೀಯರ ಪಾಲು. ಎಲ್ಲರೂ ವ್ಯಾನು ಹತ್ತಿದರು. ಸಹಾನಿಯನ್ನು ತೋಳ್ತಿಕ್ಕೆಯ ಸಹಾಯದಿಂದ ಯಾರೋ ಒಬ್ಬ ಟ್ರಕ್ಕು ಹತ್ತಿಸಿದ. ಸುಡು ಬಿಸಿಲಿನ ತಾಪ, ಒಡಲಲ್ಲಿ ಹಸಿವೆ. ಗಂಟಲಾರಿ ಒಣಗಿದ ತುಟಿಗಳು. ಅದೆಲ್ಲಕ್ಕೂ ಮಿಕ್ಕು ಮೀರಿದ ಸಂತಸ....ಭಾರತ ಭೂಮಿಯನ್ನು ಮುಟ್ಟುವ ಸಂತಸ.

ಬಿಡುಗಡೆ.....! ಚೀನೀಯರ ಸೆರೆಯಿಂದ ಬಿಡುಗಡೆ !

ಎಲ್ಲರ ಮುಖದಲ್ಲೂ ಕುಲುಕುಲು ನಗೆ, ಯಾವು ಯಾವುದೋ ಭಾಷೆಯಲ್ಲಿ ಪರಸ್ಪರ ಮಾತಾಡುತ್ತ ವೈರಿಗಳನ್ನು ತೆಗಳುತಿದ್ದರೆ ಮೊಂಡರಿಗೆ ಅರ್ಥವಾಗಬೇಕೆ? ಅಂತೂ, ನಗೆ ಮಾತುಗಳಲ್ಲಿಯೂ ಸಂಕಟ–ಸಂತಸ.

ಟ್ರಕ್ಕುಗಳು ಧೂಳೆಬ್ಬಿಸುತ್ತ ಹೊರಟುವು. ವನ್ಯ ಪ್ರದೇಶವನ್ನು ಇಬ್ಭಾಗವಾಗಿಸಿದ ಟಾರು ಬಳಿಯದ ರಸ್ತೆ. ಪರ್ವತ ಚರಣತಲದ ಇಕ್ಕಟ್ಟಿನಲ್ಲಿ ಹರಿದ ಹಾದಿಯ ಇಕ್ಕೆಲಗಳಲ್ಲಿ ಕಲ್ಲು ಜಲ್ಲಿಗಳ ರಾಶಿ ರಾಶಿ. ಜಲ್ಲಿ ಒಡೆಯುವರು ಒಡೆಯುತ್ತಿದ್ದಾರೆ; ಹೊರುವವರು ಹೊರುತಿದ್ದಾರೆ.

ಮುಂದೆ ಸಿ-ಕಿಯಾಂಗ್ ನದಿ ಜುಳು ಜುಳು ನಿನಾದಗೈಯ್ಯುತ್ತ ಹರಿಯುತ್ತಿದೆ. ಕೋಟ್ಯಾನುಕೋಟಿ ಚಿಯಾಂಗ್-ಚಿಂಗರ ಕಂಬನಿಯೇ ಹರಿಯುತ್ತಿರುವಂತೆ. ಹಾದಿಯ ನೇರಕ್ಕೆ ಮಹಾ ಸೇತುವೆಯೊಂದು ನವ್ಯ ರೀತಿಯಲ್ಲಿ ನಿರ್ಮಾಣವಾಗುತ್ತಲಿದೆ. ಅಸಂಖ್ಯ ಸ್ತ್ರೀ ಪುರುಷರು ಕಾರ್ಯನಿಮಗ್ನರಾಗಿದ್ದಾರೆ. ಅದರಲ್ಲಿ ಕ್ಷೇಮಂಕರಿಯಾದ ಚಿಯಾಂಗ್-ಚಿಂಗ್ ಯಾರೋ.....

ಚೀನೀಯರು ಕೂಗಿದರು "ಹಿಂದೀ ಚೀನೀ ಭಾಯೀ ಭಾಯೀ !"

ಭಾರತೀಯರು ದನಿಗೂಡಿದರು "ಹಿಂದೀ ಚೀನೀ ಭಾಯೀ ಭಾಯೀ !"



# ಪರಿಸಮಾಪ್ತಿ

೫

Much it grieved my heart to think
What man has made of man

ಎಂದೂ, ಯಾವತ್ತೂ ವರ್ಡ್ಸ್‌ವರ್ತನ ನುಡಿಗಟ್ಟು ಚಿತ್ರಭಿತ್ತಿಯಲ್ಲಿ ಚಲನಚಿತ್ರದಂತೆ ಹಾದು ಹೋಗುತ್ತಲೇ ಇರುತ್ತದೆ. ಪ್ರತಿನಿತ್ಯ ಜೀವನ ಕಠೋರ ಸತ್ಯ ಪ್ರತ್ಯಕ್ಷವಾದುದೇ. ನಾವು ನಮ್ಮ ಪರಿಸರದಲ್ಲಿ ನೋಡುವ ದುರ್ವ್ಯವಹಾರ ಅಧರ್ಮ–ಅಸತ್ಯ–ಅನೀತಿ–ಅನ್ಯಾಯಗಳಿಗೆ ಕೊನೆಯೇ ಇಲ್ಲ. ಕೋರ್ಟು ಕಛೇರಿಗಳಂತೂ ಸುಳ್ಳಿನ ಜಾಲದಲ್ಲಿಯೇ ಮುಳುಗಿವೆ. ಇದಕ್ಕೆ ಮಿತಿಯೇ ಇಲ್ಲವೇನೋ ಎಂಬಷ್ಟು ಜಟಿಲ. ವಿದ್ಯಾ ಸರಸ್ವತಿಯ ಪ್ರಸಾದ ಪಡೆದವರೇ ಹೀಗಾದರೆ ಸಾಮಾನ್ಯರ ಪ್ರಶ್ನೆ ಎತ್ತು ವುದೇ ವ್ಯರ್ಥ.....ಎನ್ನುತ್ತದೆ ಅಂತರಂಗ, ನೋವಿನ ಆಗರವಾಗಿ.

ವೃತ್ತ ಪತ್ರಿಕೆಯೊಂದನ್ನು ತಿರುವಿಹಾಕಿದೆ. ಅದರಿಂದ ಸಂತಸ ತರುವ ವಿಷಯಗಳಿಗಿಂತ ಸಂಕಟ ತರುವ ವಿಷಯಗಳೇ ಹೆಚ್ಚು. ಅನೇಕ ವೇಳೆ ಪತ್ರಿಕೆ ಓದುವುದೇ ಬೇಡ ಎನಿಸುವಷ್ಟು ಜುಗುಪ್ಸೆ. ಪತ್ರಿಕೆಯನ್ನು ಮಡಿಸಿ ಬದಿಗಿಟ್ಟೆ. ಈ ಪ್ರಪಂಚ ಏಕೆ ಇಷ್ಟು ನೋವುನಿಡಿಗಳಿಂದ ತುಂಬಿದೆ? ಅದೇ ಅರ್ಥವಾಗದ ವಿಷಯ.

ಸತೀಶ ತಮ್ಮ–ತಂಗಿ–ತಾಯಿಯರಿಗಾಗಿ ಊರಿಗೆ ಹಣ ಕಳುಹಿಸು ತಿದ್ದುದರಿಂದ ನಮ್ಮ ಜೀವನ ನಿರ್ವಹಣೆಗಾಗಿ ನಾನು ದುಡಿಯುವುದು

ಅನಿವಾರ್ಯ. ಆರ್ಥಿಕ ಸ್ಥಗಿತವಿಲ್ಲದಿದ್ದರೆ ಸತೀಶ ನನ್ನನ್ನು ದುಡಿಮೆಗೆ ಖಂಡಿತ ಹಚ್ಚುತ್ತಿರಲಿಲ್ಲ. ಅವನ ಮಾಸ್ತರಿಕೆಯು ಪಗಾರ ಯಾವ ಮೂಲೆಗೆ? ದುರದೃಷ್ಟದಿಂದ ನನಗೊಂದು ಒಳ್ಳೆಯ ಕೆಲಸವೂ ಸಿಗಲಿಲ್ಲ. ಮನಸ್ಸು ಗುಮಾಸ್ತಗಿರಿಯಿಂದ ಸೋತು ಹೋಗಿತ್ತು. ಅದರಲ್ಲಿ ರಾಗವೂ ಇಲ್ಲ; ರಸವೂ ಇಲ್ಲ. ಈ ಆಫೀಸು ಸರಿಯಿಲ್ಲವೆಂದು ಇನ್ನೊಂದು-ಮತ್ತೊಂದು ಹೀಗೆ ಆಗಾಗ್ಗೆ ಬದಲಿಸಿಯೂ ಆಗಿತ್ತು. ಕೆಲಸ ಮಾಡುವುದೇ ಜುಗುಪ್ಸೆ. ಮನೆ ಬಿಡುವುದೇ ಬೇಸರ.

ಸತೀಶನೊಡನೆ ಪ್ರಾಸಂಗಿಕವಾಗಿ "ನಿನ್ನ ಶಾಲೆಯಲ್ಲೇ ಕೆಲಸ ಕೊಡಿಸಿದರೆ ಇಬ್ಬರೂ ಒಂದೇಕಡೆ ಕೆಲಸ ಮಾಡಬಹುದು. ನನಗೆ ಗುಮಾಸ್ತಿಕೆ ಸಾಕಾಗಿದೆ" ಎಂದೆ, ಒಡಲ ಸಂಕಟವನ್ನು ತೋಡಿಕೊಳ್ಳುವಂತೆ.

ಸತೀಶ ಸ್ವಲ್ಪ ಹೊತ್ತು ಯೋಚಿಸಿ "ಅದು ಒಳ್ಳೆಯದೇ" ಎಂದ. ಮನದಲೆಯಲ್ಲಿ ಯಾವ ಯಾವ ಚಿತ್ತಾರವೋ, ಸ್ವಲ್ಪ ಹೊತ್ತು ಗಂಭೀರ ಮೌನ ರಾಜ್ಯವಾಳಿತು. ಅನಂತರ ಅವನೇ ಮೌನ ಮುರಿದ,

"ಶುಭೆ! ಪ್ರಯತ್ನಿಸುವೆ.....ನೋಡೋಣ ಏನಾಗುತ್ತೆ. ಅದೃಷ್ಟವಿದ್ದರೆ ಸಿಗಬಹುದು."

ನಾನು ಮನದಲ್ಲಿ ಶಾಲೆಯ ಸುಂದರ ವಾತಾವರಣವನ್ನು ಸ್ಮರಿಸಿಕೊಂಡೆ. ಹೃದಯಪಕ್ಷಿ ಸಾನಂದದಿಂದ ಹಾಡಿತು; ಮೈಮನಗಳು ಪುಳಕಿತವಾಗುವಂತೆ.

ಕಳೆದ ಆರೇಳು ವರ್ಷಗಳ ಜೀವನ ಯಾತ್ರೆ ಚಲನಚಿತ್ರದಂತೆ ಚಿತ್ತ ಭಿತ್ತಿಯ ಮೇಲೆ ಸುಳಿಸುಳಿಯತೊಡಗಿತು. ಹೇಗಾದರೂ ಹಳೆಯ ಜೀವನಕ್ಕೊಂದು ತೆರೆ ಹಾಕಿ ಹೊಸ ಜೀವನದ ಹೆಬ್ಬಾಗಿಲು ತೆರೆದರೆ ಸಾಕು. ಇನ್ನಾದರೂ ಜೀವನಮಾರ್ಗಯೋಗ ಮುಂಬೆಳಕಿನಿಂದ ಕೂಡಿರಲಿ..... ಎಂದೆಲ್ಲಾ ಮಾನಸ ಮುರಳಿ ಹಾಡುವಾಗ ದೃಷ್ಟಿ ಪತಿಯ ಮುಖಭಾವವನ್ನು ಗಮನಿಸುತಿತ್ತು.

ಇದುವರೆವಿಗೂ ಆತನ ಒಳಮನಸ್ಸಿನ ಸತ್ಯ ಕಂಡು ಬಂದಿರಲಿಲ್ಲ. ಇಂದು ಏನೋ ಒಂದು ರೀತಿಯಲ್ಲಿ ವ್ಯಕ್ತವಾದ ಭಾವ ಬಂಧುರತೆಯಿಂದ ನಾನು ಮೈ ಮರೆತುಬಿಟ್ಟೆ.

ವಿದ್ಯಾರ್ಜನೆಯ ಅಂಕ ಮುಗಿದಲ್ಲಿಂದ ಈವರೆಗೆ ಸರಿಯಾದ ನೆಲೆಯೇ

ಕ್ಕಿರಲಿಲ್ಲ. 'ಸಂತೃಪ್ತಿ' ಎಂಬುದು ಬಿಸಿಲ್ಗುದುರೆಯಂತೆ ಯಾವತ್ತೂ ದೂರದೂರವೇ! ಜೀವನಾರಂಭವಾದುದು ಸೊನ್ನೆಯಿಂದಲೇ. ಸತೀಶನ ದುಡಿಮೆ ಸಾಮಾನ್ಯ ಜೀವನಕ್ಕೂ ಕೂಡ ಏನೇನೂ ಸಾಲದು. ನಾನೂ ಪ್ರಯತ್ನ ಪೂರ್ವಕವಾಗಿ ಕೈಗೂಡುವುದರಿಂದ ಸ್ವಲ್ಪ ಹಗುರ. ಸತೀಶ ಅಷ್ಟು ಮಾತ್ರ ಥಾರಾಳಿಯಾಗದಿದ್ದರೆ ಒಪ್ಪೊತ್ತೂಟವೇ.

ಅಂತಲೇ ನನಗೆ ಆಫೀಸಿನಿಂದ ಆಫೀಸಿಗೆ ಅಲೆತ. ಕೊನೆಗೆ ಸಾಕಾಗಿ ಶಾಲೆಯ ಕೆಲಸಕ್ಕಾಗಿ ಸತೀಶನಿಗೆ ದುಂಬಾಲಬಿದ್ದೆ. ಮಾಸ್ತರಿಣಿಯಾಗಿ ಕೆಲಸ ಮಾಡುವುದರಲ್ಲಿ ಹಿತ. ಮೇಲಾಗಿ, ಇಬ್ಬರೂ ಒಂದೇ ಕಡೆ ಕೆಲಸ ಮಾಡ ಬಹುದು ಎಂಬ ಕಾರಣವೂ ಇತ್ತು. ಅದೃಷ್ಟವಶಾತ್ ಕೆಲಸ ಸಿಕ್ಕಿತು.

ಆ ದಿನ ನನಗುಂಟಾದ ಶಾಂತಿ-ಸಮಾಧಾನ-ಆನಂದಗಳು ಅವರ್ಣ ನೀಯ. ನೇರವಾಗಿ ದೇವಸ್ಥಾನಕ್ಕೆ ಹೋಗಿ ಆನಂದಪೂಜೆ ಮನಸಾ ಸಲ್ಲಿಸಿದೆ. ಹೃದ್ಗಡಲು ಉಕ್ಕೇರಿತು. ಕಣ್ಣುಗಳು ಆನಂದಭಾಷ್ಪದಿಂದ ಒದ್ದೆಯಾದುವು.

ಆ ಶಾಲೆಗೆ ಪ್ರಪ್ರಥಮವಾಗಿ ಹೆಜ್ಜೆಯಿಟ್ಟದಿನ ಶಾಲಾ ಮಾಸ್ತರಣಿ ಯರ ಭೇಟಿಯಾಯಿತು. ಮುಖ್ಯೋಪಾಧ್ಯಾಯಿನಿಯನ್ನೂ ಕಂಡೆ. ಎಲ್ಲ ರದೂ ಸ್ನೇಹಭರಿತ ಕೂಟ.

ಹಿಂದೊಮ್ಮೆ ಉಪಾಧ್ಯಾಯಿನಿಯಾಗಿ ಸೇರುವ ಇಚ್ಛೆ ನಾನು ವ್ಯಕ್ತ ಪಡಿಸಿದಾಗ ಮುಖ್ಯೋಪಾಧ್ಯಾಯಿನಿ ಸಮಾಧಾನದಿಂದ ಹೇಳಿದರು.

"ಕನ್ನಡ ತರಗತಿಗೆ ಅಗತ್ಯವಾಗಿ ಒಬ್ಬ ಉಪಾಧ್ಯಾಯಿನಿ ಬೇಕೇ ಬೇಕು. ಒಬ್ಬಳೇ ಎರಡು ಮೂರು ಕಡೆ ನೋಡಿಕೊಳ್ಳುವುದು ಕಷ್ಟವೇ. ಮುಂದಿನ ಶಾಲಾರಂಭದಲ್ಲಿ ತೆಗೆದುಕೊಳ್ಳಬಹುದು."

"ಆಗಲಿ, ನೀವು ಅಷ್ಟು ಉಪಕಾರ ಮಾಡಿದರೆ ಎಂದೂ ಮರೆಯು ವುದಿಲ್ಲ."

"ಸತೀಶ ಕೆಲಸ ಮಾಡಿರುವುದು ಸಾಮಾನ್ಯವಲ್ಲ. ಶಾಲೆ ದಿನೇ ದಿನೇ ಬೆಳೆಯುವುದಕ್ಕೆ ಬಹಳ ಶ್ರಮಿಸಿದ ವ್ಯಕ್ತಿ. ಇದರ ಪುರೋಭಿವೃದ್ಧಿ ಇಂತಹ ಗೆಳೆಯರಿಂದಲೇ ಆದುದು. ಬರೀ ಒಬ್ಬೊಬ್ಬರಿಂದ ಏನಾದೀತು ಹೇಳು? ಹನಿಗೂಡಿದರೆ ಹಳ್ಳ. ಅವರಂತಹ ಹತ್ತು ಮಂದಿಯಿದ್ದರೆ ಎಂತಹ ಕೆಲಸ ವಾದೀತು ಗೊತ್ತೆ? ಕರ್ತವ್ಯ ನಿಷ್ಠೆಯನ್ನು ಸತೀಶನಿಂದ ಕಲಿಯಬೇಕು!"

ಆ ಮಾತು ಕೇಳಿ ಆನಂದದ ಹೆದ್ದೆರೆಗಳಿಂದ ಹೃದಯ ಬಿರಿಯುವಂತಾಯಿತು. ಮೈಯೆಲ್ಲಾ ಸಂತಸದ ಖನಿಯಾದೆ. ಮುಂದೆ ನಾನೂ ಇಂತಹ ಕರ್ತವ್ಯ ನಿಷ್ಠೆಯನ್ನು ಪಾಲಿಸಬಲ್ಲೆನಾದರೆ ನನಗೂ ಸ್ವರ್ಗಕ್ಕೂ ವಿದ್ಯೆಯೇ ಸುಂದರ ಸೇತು ; ಪವಿತ್ರ ಜೀವನ ; ವಿದ್ಯಾ ಸರಸ್ವತಿಯ ಆರಾಧನೆ!

ಇದಕ್ಕಿಂತ ಇನ್ನೇನು ಬೇಕು ?

ಬೀಸುವ ತಂಗಾಳಿಯಲ್ಲಿ ಅದೇ ಪ್ರಶ್ನೆ ಹೊಮ್ಮಿತು.....ಇದಕ್ಕಿಂತ ಇನ್ನೇನು ಬೇಕು ?

ಪಕ್ಷಿಗಳುಲಿಯಲ್ಲಿಯೂ ಅದೇ ಧ್ವನಿ....ಇದಕ್ಕಿಂತ ಇನ್ನೇನು ಬೇಕು ?

ಮೈ ಮನಗಳೆಲ್ಲಾ ರೋಮ ಹರ್ಷಕ; ವಿದ್ಯೆ ಬುದ್ಧಿಗಳು ಜೀವಹರ್ಷಕ.

* * * *

ತೇನ ವಿನಾ ತೃಣಮಪಿ ನ ಚಲತಿ..........

"ನಮ್ಮ ಶಾಲೆಯಲ್ಲಿ ನಿನಗೆ ಪುಣ್ಯವಶಾತ್ ಕೆಲಸ ಸಿಕ್ಕಿದೆ. ಬಹುಶಃ ಅಂದಿಂದಿನ ನನ್ನ ಕರ್ತವ್ಯನಿಷ್ಠೆ-ಸೇವಾಮನೋಧರ್ಮವನ್ನು ಗಮನಿಸಿ ನಿನ್ನ ಸೇರ್ಪಡೆಗೆ ಒಪ್ಪಿಗೆ ಕೊಟ್ಟಿದ್ದಾರೆ ಧರ್ಮದರ್ಶಿಗಳು. ಆದ್ದರಿಂದ ನಿನ್ನ ಸೇವಾಶ್ರದ್ಧೆ ಏಕತ್ರವಾಗಿರಲಿ. ಯಾರೊಂದಿಗೂ ಅಸಹನೆ-ಅಸಹಕಾರ ತೋರಬೇಡ. ಇದನ್ನು ಸರ್ವತ್ರ ಸದಾ ಗಮನದಲ್ಲಿಟ್ಟುಕೊ..............."

ಸತೀಶನ ಕಂಠಶ್ರೀಯಲ್ಲಿ ಅನನ್ಯ ಅನುಭಾವ-ಅನುಶೀಲತೆಯ ಠೇಂಕಾರ ರಸಧಾರೆಯಾಗಿ ಸ್ಫುರಿಸಿದುದನ್ನು ಕಂಡು ನನ್ನ ಮೈ ಆನಂದ ಪುಳಕವಾಯಿತು.

"ಹರೆ! ರಾಂ! ಇದುವರೆಗೆ ಆಫೀಸಿನಿಂದ ಆಫೀಸಿಗೆ ಅಲೆದು ಅಲ್ಲಿ-ಇಲ್ಲಿ ಕೆಲಸ ಮಾಡಿ ಸಾಕಾಗಿದೆ ನನಗೆ. ಇನ್ನು ಮಕ್ಕಳ ಒಡನಾಟದಿಂದ ನಿಜಕ್ಕೂ ಮನಃಪ್ರಾಣಗಳಿಗೆ ಉಲ್ಲಾಸಮಾಡಿಸಿಕೊಳ್ಳುವೆ. ಅಂದಮೇಲೆ ಎಲ್ಲಿಯ ಅಸಹನೆ-ಅಸಹಕಾರ.........? ತೇನ ವಿನಾ ತೃಣಮಪಿ ನ ಚಲತಿ.........."

ನನ್ನ ಆಶ್ವಾಸನೆಯಿಂದ ಅವನ ಮುಖಬಿಂಬ ಹೂವಿನಂತೆ ಅರಳಿತು. ಸಂತಸದಿಂದ ಮುಂದುವರಿದ,

"ಸಧ್ಯ ಪಗಾರ ಕಡಿಮೆ. ಕ್ರಮಕ್ರಮೇಣ ಹೆಚ್ಚಿಸಬಹುದು. ನೀನಾಗಿ

ಅದರ ಸೊಲ್ಲು ಎತ್ತಬೇಡ. ಯಾವತ್ತೂ ಸಮಾಧಾನ-ಸಹಕಾರಗಳಿಗೆ ಕುಂದು ಬರಬಾರದು....

ಈ ರೀತಿ ಸಾಗಿತು ಸತೀಶನ ಸಂದೇಶಧಾರೆ, ಸಂದರ್ಭೋಚಿತವಾಗಿ. ಆರ್ಥಿಕ-ಬೌದ್ಧಿಕ-ಮಾನಸಿಕ ಸಂವಿಧಾನಕ್ಕೆ ಒದಗಿದ ಅಲ್ಪ ಸೌಲಭ್ಯಕ್ಕಾಗಿ ಪರಮಾತ್ಮನಿಗೆ ಮನಸೇಚ್ಛೆ ವಂದಿಸಿದೆ. ಹೃದಯಾರವಿಂದ ದಳದಳವಾಗಿ ಅರಳಿತು ಇನ್ನಾದರೂ ಬದುಕು ಸುಂದರವಾದೀತು ಎಂಬ ಹಾರೈಕೆಯಿಂದ.

ದಿನಗಳು ಒಂದೊಂದಾಗಿ ಉರುಳಿ ಶಾಲಾವೃತ್ತಿಯ ದಿನ ಬಳಿಸಾರಿ ಬಂತು. ಆನಂದ ವರ್ಷಣದಿಂದ ಮನಃಪ್ರಾಣಗಳು ಸಂತಸದ ಸವಿಯನ್ನು ಉಂಡು ತೇಗಿದುವು.

ಇಂದು, ಪ್ರಪ್ರಥಮವಾಗಿ ಶಾಲೆಯ ಆಫೀಸಿನ ಮೆಟ್ಟಿಲುಗಳನ್ನು ಹತ್ತುವಾಗ ಅದೆಂತಹ ಆನಂದವೋ.........ಎದೆಯ ನೆಲೆಯಲ್ಲಿ ಹೃದಯ ಮೃದಂಗ ವ್ಯಾಪ್ತಿಗೆ ಮೀರಿ ಮಿಡಿಯಿತು. ದಡ. ದಡ. ದಡ. ದಡ. ಅದು ಆನಂದ ದ್ಯೋತಕವೊ, ಭಯಸೂಚಕವೊ ಗೊತ್ತಾಗಿ ಹೇಳಲಾರೆ.

ಆಫೀಸಿನಲ್ಲಿ ಮುಖ್ಯೋಪಾಧ್ಯಾಯಿನಿ ಮುಗುಳು ನಗೆಯ ಸ್ವಾಗತ ನೀಡಿದಾಗ ನನಗೂ ಸ್ವರ್ಗಕ್ಕೂ ಹೆಚ್ಚು ಅಂತರವೇ ಇರದಷ್ಟು ಮಹದಾನಂದ ಮೂಡಿತು. ರಿಜಿಸ್ಟರಿನಲ್ಲಿ ಸಹಿ ಹಾಕಿ ಮುಖ್ಯೋಪಾಧ್ಯಾಯಿನಿಗೆ ವಂದನೆ ಸಲ್ಲಿಸಿ ನನ್ನ ತರಗತಿಯ ಕಡೆ ಮೊಗ ತಿರುವಿದೆ.

ಸುಂದರ ಪುಷ್ಪೋದ್ಯಾನದ ಸತ್ಯ ಸುಂದರ ಹಾದಿ. ಕೈಬೀಸಿ ಕರೆಯುವ ಪುಷ್ಪಸಮುಚ್ಚಯ.

ಪ್ರಾಂಗಣದ ತುಂಬೆಲ್ಲಾ ನಲಿದಾಡಿ ಕುಣಿಕುಣಿಯುವ ಮಕ್ಕಳು. ಆ ಮುದ್ದು ಮಕ್ಕಳ ತುಂಬು ಗಲ್ಲಗಳ ಮೇಲೆ ಮಿನುಗುವ ಎಳೆ ನಗುವಿನ ಹರವು. ನಾಕ್ಷತ್ರಿಕ ನೇತ್ರಗಳ ಮಿಂಚುನೋಟ.....ಗರಿಗರಿಯಾದ ಸಮವಸ್ತ್ರಗಳ ಆಕಾಶ ನೀಲಿ ವರ್ಣ. ಒಂದೊಂದೂ ಹಿತಕರ. ಮೇಲಾಗಿ, ನಯನಾಕರ್ಷಣೀಯ....ಎಷ್ಟೆಷ್ಟು ದಿನಗಳಿಂದ ಕಾಣುತಿದ್ದ ಕನಸು ನನಸಾಯಿತು ಇಂದು!

ಸಂತಸ–ಸೌಮನಸ್ಯ–ಸ್ನೇಹ–ಪ್ರೀತಿ–ವಿಶ್ವಾಸಗಳ ದ್ಯೋತಕ ಮಕ್ಕಳ ವಾತಾವರಣ.

ಇನ್ನು ಮುಂದೆ ನನ್ನ ಜೀವನವೂ ಹೀಗೆಯೇ ಇರಲಿ. ಆಫೀಸಿನ ಹಾಳುಮೂಳುಗಳ ಕರಕರೆಯಲ್ಲಾ ಅಂದಿಗೇ ಮುಗಿಯಿತು. ಇನ್ನು ಮಕ್ಕಳೊಂದಿಗೆ ನಾನು ಹಾರುವ ಹಕ್ಕಿ ! ಹಾಡುವ ಹಕ್ಕಿ !

ಹರಿ ! ರಾಂ ! ನಾನೇಕೆ ಇಷ್ಟೊಂದು ಹಿಗ್ಗುತ್ತಿರುವೆ ? ಹಿಗ್ಗು ಯಾವ ತಗ್ಗಿಗೆ ನಾಂದಿಯೋ !

ಅಂತರಂಗದ ಎಚ್ಚರಿಕೆ ಹೊಮ್ಮಿದಾಗ ವೈಮನಗಳೆಲ್ಲಾ ಒಂದು ಗಳಿಗೆ ಸ್ತಬ್ಧ.

*     *     *     *

ಅದೊಂದು ಸುಂದರ ಪ್ರಾತಃಕಾಲ..........

ಪಕ್ಷಿಸಮಾಜದ ಕಲಕಲರವದ ಮೋಹಕತೆಯಲ್ಲಿ ಜಗತ್ತು ರಾಗ ಮಯವಾಗಿ–ಮಧುಮಯವಾಗಿ ತೋರಿತು. ದೃಷ್ಟಿಯು ನೇರಕ್ಕೆ ಬಾಲ ಕೋಮಲ ದಿನಮಣಿ ಹೆಮ್ಮುಗಿಲ ಹೇರಾಶಿಗೆ ಕೆಮ್ಮನೆಯಂಚು ಬಳಿದು ಮೇಲೇರುವುದನ್ನು ನೋಡುನೋಡುತ್ತ ಹಾದಿ ಸವೆಸಿದೆ. ಕಳೆದ ಆರೇಳು ತಿಂಗಳಿಂದ ನಡೆಯುತ್ತಿದ್ದ ಆ ಹಾದಿ ಕಣ್ಣುಗಳ ಸಹಾಯವಿಲ್ಲದಿದ್ದರೂ ಸರಾಗವಾಗಿ ನಡೆಯುವಷ್ಟು ಪರಿಚಯ ಕಾಲುಗಳಿಗೆ.

ಹಾದಿ ಹತ್ತುನೂರು ಸವೆಯುವುದರೊಳಗಾಗಿ ಬೆನ್ನಿನ ಮೇಲೆ ಯಾರೋ ಕೈಯಿಟ್ಟಂತಾಗಲು ಭಯಭೀತಿಯಿಂದ ತಟ್ಟನೆ ಹಿಂತಿರುಗಿ ನೋಡಿದರೆ ನನ್ನ ಸಹೋದ್ಯೋಗಿನಿ ಕಮಲಿ.

"ಹರಿ, ರಾಂ ! ಈ ದಾರಿಯಿಂದ ಬರುತಿದ್ದೀ ?" ಎಂದೆ ಆಶ್ಚರ್ಯ ಪ್ರಸನ್ನ ಮುಖದಿಂದ.

"ಅದೇಕೆ ಬೆಚ್ಚಿಬಿದ್ದೆ ? ಈ ಹಗಲ ಹೊತ್ತಿನಲ್ಲಿ ಭಯವೇ ?"

ನಾನು ಯಾವುದನ್ನು ಮರೆಮಾಚಲು ಬಯಸಿದ್ದೆನೋ ಅದನ್ನೆ ಅವಳ ಪ್ರಶ್ನೆ ಕೊಕ್ಕೆಹಾಕಿ ಹೊರಗೆಳೆದಾಗ ಮುಗುಳು ನಕ್ಕು "ಹಿಂದಿನಿಂದ ಯಾರಾದರೂ ಕಾಣದಂತೆ ಕೈ ಹಾಕಿದರೆ ಭಯವಾಗದೇ ?" ಎಂದು ಪುನಃ "ಬಹುಶಃ ಇಂತಹ ಸಂದರ್ಭದಲ್ಲಿ ನೀನೂ ಅಷ್ಟೆ....."

ನಿನ್ನಷ್ಟು ಪುಕ್ಕಲು ಅಲ್ಲ ನಾನು....ಬಿಡು, ನಿನ್ನೆಯಿಂದ ನನಗೆ ನೆಗಡಿ–

ತಲೆನೋವು ತುಂಬಾ ತೊಂದರೆ ಕೊಡುತ್ತಿದೆ. ಔಷಧಿಗಾಗಿ ಈ ದಾರಿಯಿಂದ ಬಂದೆ."

"ಒಳ್ಳೆಯದು ಈಗ ನಿನಗೂ ನನಗೂ ಜೋಡಿಯಾಯಿತು. ಅಂದ ಹಾಗೆ, ದಿನವೂ ಹೀಗೆಯೇ ಬಂದರೆ ನಮಗೂ ಕೂಡಿ ನಡೆಯಲು ಅನುಕೂಲ. ಅದನ್ನು ಇಷ್ಟು ದಿನವೂ ನಾವು ಯೋಚಿಸಲಿಲ್ಲವಲ್ಲಾ ? ನಿನ್ನ ನೆಗಡಿ ನಮ್ಮನ್ನು ಒಗ್ಗೂಡಿಸುವುದಾದರೆ ಒಳ್ಳೆಯದೆ !"

ಇಬ್ಬರ ಮುಖದಲ್ಲೂ ಮಂದಹಾಸ ಮಿನುಗಿತು ತಟ್ಟನೆ ಹೊಮ್ಮಿದ ಹಾಸ್ಯದ ಕಿಡಿಯಿಂದ.

ಮರುಗಳಿಗೆಯಲ್ಲಿ ಏನನ್ನೋ ಜ್ಞಾಪಿಸಿಕೊಂಡವಳಂತೆ ಮೈಯೆಲ್ಲಾ ಆನಂದ ಪುಳಕಿತವಾಗಿ ತುಟಿಗಳಲ್ಲಿ ತುಂಟನಗೆಯನ್ನು ಚೆಲ್ಲಿ "ನಾನು ಈವರಗೆ ಏನೋ ಒಂದು ರೀತಿ ನಿರ್ಲಕ್ಷ್ಯದಿಂದಿದ್ದೆ. ನಿನ್ನ ಆಳವನ್ನು ಕಂಡುಕೊಂಡಿರಲಿಲ್ಲ...." ಎಂದಳು ಕಮಲಿ ನಯನ ಕೋರಕಗಳಿಂದ ನೋಡುತ್ತ.

ನಾನು ಆಶ್ಚರ್ಯವಿಸ್ಮೃತ ಚಕ್ಷುಗಳಿಂದ ಅವಳನ್ನು ನಿಟ್ಟಿಸಿದೆ. ಯಾವತ್ತೂ ಅವಳಲ್ಲಿ ರಾಜಕುಮಾರಿಯ ಠೀವಿ–ತುಂಟತನ ಇದ್ದದ್ದೇ..... ಅವಳ ನುಡಿಯ ಅಂತರಾರ್ಥದಲ್ಲಿ ವಿಶೇಷ ಚಹರೆಗಳೇನೂ ಇರಲಿಲ್ಲ. ಏನೂ ಗ್ರಹಿಸಲಾರದೆ ಹುಬ್ಬೇರಿಸಿ ಕೇಳಿದೆ "ಏನು ವಿಶೇಷ ? ಹೇಳಿಬಿಡು, ಅದೇಕೆ ಮುಚ್ಚುಮರೆ ?"

"ಅಹಹ ! ಏನೂ ಗೊತ್ತಿಲ್ಲದವಳಂತೆ ಕೇಳುತಿದ್ದಿ ? ಇದರಲ್ಲೂ ಒಂದು ಮೋಜು !"

"ಹರೇ, ರಾಂ ! ನಿನ್ನ ಮಾತು ನನಗೆ ಅರ್ಥವೇ ಆಗುತ್ತಿಲ್ಲ !"

"ನಿಜವಾಗಿ ?"

"ನಿಜವಾಗಿಯೂ ಅರ್ಥವಾಗಲಿಲ್ಲ."

ಅವಳು ಸೂಕ್ಷ್ಮಾತಿಸೂಕ್ಷ್ಮವಾಗಿ ನನ್ನನ್ನು ಗಮನಿಸಿ ನೋಡಿದ ನಂತರ ಬಾಯ್ದೆರೆದಳು "ನೀನು ಒಳ್ಳೆ ಬರೆಹಗಾರ್ತಿ ! ಇಷ್ಟೊಂದು ಗೆಳೆತನವಿದ್ದರೂ ಗುಟ್ಟು ಬಿಡಲಿಲ್ಲವಲ್ಲಾ ? ಅದೇ ಸೋಜಿಗ !"

ಆ ಗಳಿಗೆಯಲ್ಲಿ ಅರಳಿ ಮಂದಾರವಾದ ಅವಳ ಕಣ್ಣುಗಳಲ್ಲಿ ಸೆಳೆ ಮಿಂಚು ಮಿಂಚಿತು.

ನಾನು ಒಂದೆರಡು ಕ್ಷಣ ಯೋಚಿಸಿದೆ.....ಇತ್ತೀಚೆಗೆ ನಾನು ಏನೂ ಬರೆಯುಲಿಲ್ಲ. ಹಿಂದೆ ಬರೆದದ್ದುಂಟು. ಅದೀಗ ತಿಳಿದು ಬಂದ ಬಗೆ ? ವಿಷಯ ಆರ್ಥೈಸಲಾರದೆ ಗುಂಟಲ ಗಾಣವಾಯಿತು. ಹುಬ್ಬೆತ್ತಿ ಅವಳನ್ನೆ ನೋಡಿದೆ.

"ನೀನು ಸಾಹಿತಿ.....?"

"ಅದರಲ್ಲಿ ಏನು ಮಹಾ ವಿಶೇಷ ?" ಎಂದ ನಾನು ಒಂದು ಗಳಿಗೆ ಯೋಚಿಸಿ ಪುನಃ "ಅದೀಗ ನಿನಗೆ ತಿಳಿದುದು ಹೇಗೆ ?"

"ವಾಹಿನಿಯಲ್ಲಿ ಓದಿದೆ ...ತುಂಬ ಚೆನ್ನಾಗಿ ಬಂದಿದೆ. ನಿನ್ನ ಕಥೆ !"

"ಹರೇ ! ರಾಂ ! ನನಗೆ ಆಶ್ಚರ್ಯ....ಇದು ನಿಜವಾಗಿಯೂ ನನಗೆ ಗೊತ್ತಿಲ್ಲ! ನಾನು ಆ ಪತ್ರಿಕೆಯನ್ನು ನೋಡಿಯೇ ಇಲ್ಲ, ಕೂಡ. ಈ ಹಿಂದೆ ಯಾವಾಗಲೋ ಕಥೆಗಳನ್ನು ಬರೆದು ಪತ್ರಿಕೆಗಳಿಗೆ ಕಳುಹಿಸಿದ್ದುಂಟು. ಅವರಿಂದ ಯಾವ ಪ್ರತಿಕ್ರಿಯೆಯೂ ಬಾರದೇ ಹೋದುದರಿಂದ ಆ ವಿಚಾರ ಮರತುಬಿಟ್ಟಿದ್ದೆ" ಎಂದು ಒಂದೆರಡು ಕ್ಷಣಗಳ ನಂತರ ಪುನಃ ಕೇಳಿದೆ "ಕಥೆಯ ಶೀರ್ಷಿಕೆ ಏನು ?"

"ತೆರೆಯ ಮರೆಯಲ್ಲಿ."

ಕಥೆಯ ಚಿತ್ರವನ್ನು ಜ್ಞಾಪಿಸಿಕೊಳ್ಳಲು ಪ್ರಯತ್ನಿಸಿದೆ. ಹಲವಾರು ಕಥೆಗಳಲ್ಲಿ ಅದಾವುದೆಂಬುದನ್ನು ಊಹಿಸುವುದು ಸಾಧ್ಯವಾಗದೆ–"ನಾನು ಆ ಪತ್ರಿಕೆಯನ್ನು ನೋಡಬೇಕಾಗಿತ್ತು" ಎಂದೆ, ಪ್ರಾಸಂಗಿಕವಾಗಿ. ಮನ ದಲ್ಲಿ ಕುತೂಹಲ ಹೆಡೆಯೆತ್ತಿತು, ತಾನೇತಾನಾಗಿ.

"ಅದಕ್ಕೇನು ಎಲ್ಲಾದರೂ ಸಿಗುತ್ತೆ ;" ಅಷ್ಟೇ ನಿರಾಳತೆಯಿಂದ ನುಡಿದಳು ಅವಳು,

ನನ್ನ ಮನಸ್ಸು ಅತ್ಯಾನಂದ ಪುಳಕಿತವಾಯಿತು.

* * * *

ಶಾಲೆಯಿಂದ ಹಿಂದಿರುಗುವಾಗ ವಾಹಿನಿ ಪತ್ರಿಕೆಗಾಗಿ ಅಂಗಡಿಯ ಸಾಲಿಗೆ ಹೋದೆ. ಸಾಲಾಗಿನ ಅಂಗಡಿಗಳಲ್ಲಿ ಯಾವುಯಾವುದೋ ಪುಸ್ತಕ ಪತ್ರಿಕೆಗಳು ಇದ್ದುವಾದರೂ ವಾಹಿನಿ ವಾರ್ತಾ ಸಂಹಿತೆ ದೃಷ್ಟಿಗೋಚರಿಸ ಲಿಲ್ಲ. ಅಂಗಡಿ ಅಂಗಡಿಗಳನ್ನು ಸುತ್ತಿ ದಣಿದೆ. ನಡುನೆತ್ತಿಯ ಮೇಲೆ ರಣರಣ

ಬಿಸಿಲು. ಮುಖ ಬಿಂಬದ ಮೇಲೆ ತುಂತುರುತುಂತುರಾಗಿ ಮೂಡಿದ್ದ ಸ್ವೇದ ಬಿಂದುಗಳು. ಒಡಲಲ್ಲಿ ಹಸಿವೆಯ ಸಂಕಟ. ನಾನು ಬೇಸತ್ತು ಮನೆಯ ಹಾದಿ ಹಿಡಿದೆ. ಶಾಲೆಯನ್ನು ಬಿಡುವಾಗ ಸಾಮಾನ್ಯವಾಗಿ ಸತೀಶ್ ಸಿಕ್ಕುವುದಿಲ್ಲ. ಅವನ ಕೆಲಸ ಹೈಸ್ಕೂಲಿನಲ್ಲಿ. ನನ್ನದು ಪ್ರೈಮರಿ ಮತ್ತು ಮಿಡ್ಲ್ ಸ್ಕೂಲಿನಲ್ಲಿ. ಬೆಳಿಗ್ಗೆ ಎಂಟರಿಂದ ಮಧ್ಯಾಹ್ನ ಒಂದೂವರೆಯವರೆಗೆ ನನ್ನ ಕೆಲಸ. ಅವನದು ಹತ್ತರಿಂದ ಸಂಜೆ ಐದರವರೆಗೆ. ಶಾಲೆ ಒಂದೇ ಆದರೂ ನಮ್ಮಗಳ ಪುನರ್ಭೇಟಿ ಮನೆಯಲ್ಲೇ. ಈ ಮನೆ ಎಂಬ ಒಂದು ಕೊಠಡಿಯ ಸಣ್ಣ ಕುಟೀರದಲ್ಲಿ ನಮ್ಮ ಜೀವನೋಪಯುಕ್ತ ಸಕಲ ಜಗತ್ತೂ ಅಡಕವಾಗಿರುವುದರಿಂದ ನಿರಾಳವಾಗಿ ಉಸಿರಾಡುವುದು ಕಷ್ಟವೇ. ನಮ್ಮ ಆರ್ಥಿಕ ಪರಿಸ್ಥಿತಿಗೆ ಹೊಂದುವಂತಹ ನಿಲ್ಮನೆಗಾಗಿಯೇ ನಾವು ಇದನ್ನು ಬಾಡಿಗೆಗೆ ಹಿಡಿದುದು. ಅಂತಲೇ ಮೂರು ವರ್ಷಮಾನಗಳು ಏಕ ರೀತಿಯಲ್ಲಿ ಉರುಳಿ ಹೋಗಿವೆ ಇದರಲ್ಲಿ. ಮುಂದೆಯೂ ಸಹ ಇದೇ ಜೀವನಾಧಾರ....ಎಂದು ಹೇಳಿಕೊಳ್ಳದೆ ವಿಧಿಯಿಲ್ಲ, ಇತ್ತೀಚಿನ ಜೀವನ ಪರಿಸ್ಥಿತಿಯನ್ನು ನೋಡಿದರೆ.

ಮಧ್ಯಾಹ್ನ ನಾಲ್ಕು ಗಂಟೆಯ ನಂತರ ತೆರೆಯುವ ಕೆಲವಾರು ಅಂಗಡಿಗಳಲ್ಲಿ ವಾಹಿನಿಗಾಗಿ ಹುಡುಕುವುದು ಒಳ್ಳೆಯದು ಎಂದುಕೊಂಡೆ. ಹೊತ್ತು ಉರುಳಿದಷ್ಟೂ ತವಕ ಮನಸ್ಸಿಗೆ.

ಮಧ್ಯಾಹ್ನ ನಾಲ್ಕು ಗಂಟೆಯ ಸಮಯ.

ಮನೆಯಿಂದ ಅಂಗಡಿ ಸಾಲು ಅಷ್ಟು ಹತ್ತಿರವೇನಲ್ಲ. ಬಸ್ಸಿನಲ್ಲಿ ಜನ ಒತ್ತಡವನ್ನು ಗಮನಿಸಿದರೆ ನಡೆಯುವುದೇ ಲೇಸು ಎನಿಸುವುದು ಸಹಜ. ಅಂತಲೇ, ಬಸ್ಸಿಗಾಗಿ ಕಾಯುವ ಯೋಚನೆಯನ್ನು ಬಿಟ್ಟು ಹೆಜ್ಜೆಗಳಿಗೆ ಕಾಯಕ ನೀಡಿದೆ. ಬೌದ್ಧಿಕಸ್ತರದಲ್ಲಿ ಆವಿರ್ಭವಿಸುವ ಸ್ಥೂಲ-ಸೂಕ್ಷ್ಮ ವಿಚಾರತರಂಗಗಳಿಂದ ಮನಃಚಿತ್ರಗಳು ದೀರ್ಣವಿದೀರ್ಣವಾಗಿ ಹೆಜ್ಜೆಗಳಿಗೆ ಆದೇಶ ನೀಡುವುದೂ ಮರೆತು ಹೋಯಿತು. ಅವು ಯಾವ ಜಾಡನ್ನು ಹಿಡಿದುವೋ ಆ ಜಾಡನ್ನು ಮುಟ್ಟದ ಮೇಲೆಯೇ ಇತ್ತ ಗಮನ. ನಾನು ಅಂಗಡಿ ಸಾಲಿಗೆ ಬಂದಿದ್ದು ನಿಜ....ಪತ್ರಿಕೆಗಳಿಗಾಗಿ ಹುಡುಕ ಬೇಕಾದುದು ಹಿಂದಿನ ಕ್ಲಾಸಿನ ಒಳಾಂತರದಲ್ಲಿದ್ದ ಸಣ್ಣ ಪುಟ್ಟ

ಅಂಗಡಿಗಳಲ್ಲಿ. ನನ್ನ ಮರೆವಿಗೆ ನಾನೇ ನಕ್ಕು ಹಿಮ್ಮರಳುವಾಗ ನೋಡಿದ ಜನ ಏನೆಂದುಕೊಂಡರೋ ಎನಿಸದಿರಲಿಲ್ಲ. ಹಿಂದಿರುಗಿ ಹೋಗಿ ಸಣ್ಣ ಅಂಗಡಿ ಸಾಲನ್ನು ಸೇರಿದೆ. ಸಾಲಾಗಿನ ನಾಲ್ಕಾರು ಅಂಗಡಿಗಳಲ್ಲಿ ಪುಸ್ತಕ–ಪತ್ರಿಕೆ ಗಳ ಪ್ರಪಂಚ. ಅಂಗಡಿಯ ತುಂಬೆಲ್ಲಾ ವಾಹಿನಿಗಾಗಿ ಅತ್ಯಾಸೆಯಿಂದ ತಡುಕಿದ ಕಣ್ಣುಗಳು ನಿರಾಸೆಯಿಂದ ಹಿಮ್ಮರಳಿದಾಗ ನಾನು ಬಾಯಿಬಿಟ್ಟು ಕೇಳಿದೆ "ವಾಹಿನಿ ಮಾಸಿಕ ಇದೆಯೇ ?"

"ಅದರ ಪ್ರತಿಗಳು ಮೊನ್ನೆಯೇ ಮುಗಿದುವು. ಈವೊತ್ತು ಎಂಟನೇ ತಾರೀಖಲ್ಲವೇ !"

ಆ ಮಾತಿಗೆ ಮನಸ್ಸು ವಿಷಯದತ್ತ ಹೊರಳಿತು. ವಾರವೊಂದು ಸಂದಿದೆ. ಇನ್ನು ಪ್ರತಿಗಳು ದೊರೆಯಲಾರವು ಎನಿಸಿದಾಗಲೂ ಮುಂದಿನ ಅಂಗಡಿಯತ್ತ ನಡೆದುವು ಕಾಲುಗಳು. ಮೊದಲೊಮ್ಮೆ ನೋಟವನ್ನು ಅಂಗಡಿಯ ಒಳಗೆಲ್ಲಾ ಹರಿಸಿದ ನಂತರ ಕೇಳಿದೆ "ವಾಹಿನಿ ಪತ್ರಿಕೆ ಇದೆಯೇ?"

"ಇಲ್ಲ....ಎಲ್ಲಾ ಆಗಿ ಹೋಗಿವೆ."

ಹೀಗೆಯೇ ಮೂರು ನಾಲ್ಕು ಅಂಗಡಿಗಳಲ್ಲಿಯೂ ವಿಚಾರಿಸಿ ನಿರಾಶ ಳಾಗಿ ಕೇಳಿದೆ "ಈಗ ಈ ತಿಂಗಳ ಪ್ರತಿ ಬೇಕೆಂದರೆ ಎಲ್ಲಿ ಸಿಗಬಹುದು ?"

"ಎಲ್ಲಾದರೂ ಮನೆಗಳಲ್ಲಿ ಕೇಳಿ.....ಅಥವಾ ಕೆಲವು ಲೈಬ್ರರಿಗಳಲ್ಲಿ."

ಮನಃಚಿತ್ತಗಳ ಹುರುಪು ತಗ್ಗಿತು. ನಾನು ನಿರಾಸೆಯಿಂದ ಹಿಂದಿರು ಗಿದೆ. ಇನ್ನು ಕಮಲಿಯನ್ನು ಕೇಳುವುದರ ಹೊರತು ಗತ್ಯಂತರವಿರಲಿಲ್ಲ. ಮನೆ ಮುಟ್ಟಿದಾಗ ಸತೀಶ್ ಇನ್ನೂ ಹಿಮ್ಮರಳಿರಲಿಲ್ಲ. ಮರುದಿನದ ಕಾರ್ಯಕ್ರಮಗಳಿಗೆ ಪೀಠಿಕೆ ಹಾಕತೊಡಗಿತು ಮನಸ್ಸು. ಅಡಿಗೆ ಮನೆಯ ಸ್ಥಿತಿಗತಿಯೂ ಕೈಬೀಸಿ ಕರೆಯುತ್ತಿದೆ.

* * * *

ಶಾಂತ ಪ್ರಶಾಂತ ಶೀತಲ ವಾತಾವರಣ.....

ಪಕ್ಷಿ ಕೊರಲುಲಿಯ ಮನಮೋಹನೀಯ ಸುಪ್ರಭಾತ....

ಬೆಳಿಗ್ಗೆ ಶಾಲೆಯ ಹೊರಾವರಣಕ್ಕೆ ಪದಾರ್ಪಣೆ ಮಾಡಿದಾಗ ವಿವಿಧ ವರ್ಣಾಂಕಿತವಾದ ಪುಷ್ಪಕೋಟಿಯ ಕಂಪು ಮನಃಪ್ರಾಣಗಳನ್ನು ಮುತ್ತಿತು. ತನು ತುಂಬುವಷ್ಟು ಸುಗಂಧವನ್ನು ಆಘ್ರಾಣಿಸುತ್ತ ಪುಷ್ಪೋದ್ಯಾನದ ಸುಂದರ ಹಾದಿಯನ್ನು ಹಾಯ್ದು ಶಾಲೆಯ ಮೆಟ್ಟಿಲನ್ನು ಹತ್ತಿದೆ. ನಾಲ್ಕಾರು

ನೆಟ್ಟಿಲನ್ನು ಹತ್ತುವಷ್ಟರಲ್ಲಿ ಎದುರಾದ ಜಯರಾಜ್ ನನ್ನನ್ನು ಮರ್ಮಾಂತಿಕ ದೃಷ್ಟಿಯಿಂದ ನೋಡುತ್ತ "ಓ! ನೀವು ಇಷ್ಟು ಲೇಖನ ಚತುರರು ಎಂದು ಕೊಂಡಿರಲಿಲ್ಲ. ನಿಮ್ಮ ಕೃತಿಯಲ್ಲಿ ಜಯತೀರ್ಥನ ಚಿತ್ರ ಬಹಳ ಚೆನ್ನಾಗಿ ಮೈಗೂಡಿಕೊಂಡಿದೆ! ತುಂಬಾ ಅಭಿನಂದನೆಗಳು !" ಎಂದರು. ತುಟಿಗಳಲ್ಲಿ ತುಂಟನಗೆ ಕ್ಷಣಕಾಲ ಮಿನುಗಿ ಮಾಯವಾಯಿತು. ನನ್ನ ಮನವನ್ನು ಆನಂದಾಶ್ಚರ್ಯಗಳು ಒಮ್ಮೆಗೇ ಮುತ್ತಿದುವು. ಆದರೆ.....ನನ್ನಿಂದ ದೂರ ದೂರವಾಗಿಯೇ ಉಳಿದ ಆ ಕೃತಿ?

ಸಧ್ಯ, ಅದರ ವಿಷಯ ಏನೇನೂ ಊಹಿಸಲಾಗದೆ, ಚಿಂತನೆಗೊಳಗಾದರೂ ತೋರ್ಪಡಿಸದೆ ಉತ್ತರಿಸುವ ಹೊಣೆಗಾರಿಕೆಯನ್ನು ತಳ್ಳಿಹಾಕದೆ ನುಡಿದೆ, "ಎಂದೋ ಬರೆದ ಕಥೆ ಈಗ ಪ್ರಕಟವಾಗಿದೆ ಎಂದು ಕೇಳಿದೆ ಅಷ್ಟೆ; ನಾನು ನಿನ್ನೆಯಿಂದ ಪ್ರಯತ್ನಿಸಿದರೂ ವಾಹಿನಿಯ ಪ್ರತಿ ದೊರೆಯಲಿಲ್ಲ. ನಿಜಕ್ಕೂ ಹೇಳುವುದಾದರೆ ಯಾವ ಕಥೆ ಪ್ರಕಟವಾಗಿದೆಯೋ ಅದೂ ಸಹ ನನ್ನ ಊಹೆಗೆ ನಿಲುಕುತ್ತಿಲ್ಲ!"

"ನಿಮಗೆ ಅದರ ಪ್ರತಿ ಬೇಕೆ?"

"ಖಂಡಿತ ದಯಮಾಡಿ....."

"ನನ್ನ ಆಫೀಸಿನ ಮೇಜಿನ ಮೇಲಿದೆ. ನಿಮ್ಮ ಶೈಲಿ ಎಷ್ಟು ಚೆನ್ನವೋ ಅಷ್ಟೇ ಕಥಾ ಚಿತ್ರ ಅರ್ಥಪೂರ್ಣವಾಗಿದೆ.....ಅಲ್ಲದೆ" ಅಷ್ಟಕ್ಕೇ ತುಟಿ ಕಚ್ಚಿದರು ಜಯರಾಜ್.

ನನಗೆ ಪ್ರತಿಯೊಂದು ಅಕ್ಷರದಲ್ಲಿಯೂ ಏನೋ ಒಂದು ರೀತಿಯ ಅರ್ಥಗರ್ಭಿತೆ ಕಂಡುಬರುತಿದ್ದುದರಿಂದ ನನ್ನ ಕಥೆಯನ್ನು ಪ್ರತ್ಯಕ್ಷವಾಗಿ ಪ್ರಶಂಸಿಸಿದರೂ ಪರೋಕ್ಷವಾಗಿ ವ್ಯಂಗ್ಯಭಾವ ತುಂಬಿದೆ ಎನಿಸದಿರಲಿಲ್ಲ. ಮನಃಚಿತ್ತಗಳು ಏನೋ ಒಂದು ರೀತಿಯ ದ್ವಂದ್ವಭಾವನೆಗೆ ಒಳಗಾದುವು. ಆದರೂ, ಅದನ್ನು ತೋರಗೊಡದೆ ಜಯರಾಜರ ಆಫೀಸಿನ ಕಡೆ ನಡೆದೆ. ಆ ಉದ್ದನೆಯ ಕಾರಿಡಾರನ್ನು ಕಳೆದು ಎಡಕ್ಕೆ ತಿರುಗಿದರೆ ಮೊದಲ ಕೊಠಡಿಯೇ ಜಯರಾಜರ ಆಫೀಸು. ಕದ ಮುಚ್ಚಿರಲಿಲ್ಲ; ನೇರವಾಗಿ ಒಳ ಹೋದೆ. ನಿರ್ಜನ ಶಾಂತಿಯಲ್ಲಿ ಮೇಜು ಕುರ್ಚಿಗಳು ಸರಸ್ವತಿಯಾರಾಧನೆ

ಗೈಯ್ಯುತ್ತಿವೆ. ನೆಟ್ಟ ನೋಟ ಮೇಜಿನ ಕಡೆ ಹರಿದು, ಪತ್ರಿಕೆಗಾಗಿ ಕಾತರಿಸಿತು ಮನಸ್ಸು. ಆದರೆ, ಅದಾಗಲೇ ಯಾರ ಕೈಸೇರಿತ್ತೋ ಏನೋ..... ಕಣ್ಮನಗಳು ನಿರಾಶವಾದರೂ ಮತ್ತೆಮತ್ತೆ ಪುನಃಪುನಃ ವಾಹಿನಿಗಾಗಿ ಅರಸಿದುವು. ಆಕ್ಷಣವೇ, ವಿಭ್ರಮೆ-ಆನಂದ-ಆಶ್ಚರ್ಯಗಳಿಂದ ಮನಃಚಿತ್ತ ಕಲಕಲಮಯವಾಯಿತು.

* * * *

ಕಿಟಕಿಯಾಚೆ ಹೊರ ಜಗತ್ತು. ಗಿಡಮರಗಳ ಕೊಂಬೆಗಳಲ್ಲಿ ಚಿಲಿಪಿಲಿ ಹಕ್ಕಿಗಳು.

ಸತೀಶ್ ಕಿಟಕಿಯಲ್ಲಿ ಮೊಗವಿಟ್ಟು ಆಕಾಶರಂಗದಲ್ಲಿ ದೃಷ್ಟಿಯನ್ನು ಚೆಲ್ಲಿಕೊಟ್ಟಿದ್ದ. ಮನದ ತುಂಬೆಲ್ಲಾ ಶಾಲೆಯ ಶಾಂತ ವಾತಾವರಣದಲ್ಲಿ ಒಮ್ಮೆಲೇ ಭುಗಿಲೇಳಿಸಿದ ಅಶಾಂತತೆಯ ಬೇಗೆ ಮನಃತರಂಗಗಳನ್ನು ಅಲ್ಲೋಲಕಲ್ಲೋಲಗೊಳಿಸಿವೆ. ಎಲ್ಲಿಯೋ ಯಾರೋ ಕಂಡ ವಾಹಿನಿಯ ಕಥಾಂತರಂಗ ಜೀವನಾಡಿಯನ್ನು ತೀವ್ರಗತಿಯಲ್ಲಿ ಮಿಡಿಸಿದ್ದುದು ಸತ್ಯ. ಈ ದಿನ ಅದರ ಪರಿಶೀಲನೆಯ ನಂತರವೇ ವಿಷಯ ಇತ್ಯರ್ಥವಾಗಬೇಕಾದರೆ. ಆದರೂ, ಹೃದಯತಂತುಗಳಲ್ಲಿ ರುದ್ರವೀಣೆ ಅರ್ಥವಾಗದ-ಅತ್ಯಂತ ಕ್ಲಿಷ್ಟಕರವಾದ ರುದ್ರಗೀತೆಯನ್ನು ತಾನೇ ತಾನಾಗಿ ಮಿಡಿಸುತ್ತಿದೆ. ಒಂದು ಸಣ್ಣ ಕಥೆಗಾಗಿ ಇಷ್ಟೆಲ್ಲಾ ಹಗರಣವೇಕೆ ಎಂಬುದು ಹಿರಿಯ ಪ್ರಶ್ನೆ. ಮನೋಮಂಡಲದಿಂದ ಯೋಚನೆಯಲೆಯನ್ನು ಪ್ರಯತ್ನಪೂರ್ವಕವಾಗಿ ಉಚ್ಚಾಟಿಸಿದರೂ ಉತ್ತರಮುಖಿಯಂತೆ ಅದು ಬಂದು ನಿಲ್ಲುತ್ತಿದ್ದುದು ಆ ದುರ್ದಾಂತ ಬಿಂದುವಿನಲ್ಲೇ.

ಏನಾಗಿ ಹೋಯಿತು ? ನಮ್ಮ ಉದ್ದೇಶಕ್ಕೆ ಈ ರೀತಿ ಮಸಿ ಒರೆಯು ಬೇಕೆ ? ಅದೂ ಅಲ್ಲದೆ, ನಿರ್ಲಕ್ಷಿಸಬಹುದಾದ ಪ್ರಕರಣ ಅನ್ಯಥಾ ಬೆಳೆಯುತ್ತಿದೆ ಏಕೆ ? ಇದರ ಪರಿಹಾರ..... ಹೇಗೆ ?

ಅಂಗಣದ ತುಂಬ ಆಟವಾಡುತ್ತಿರುವ ಮಕ್ಕಳ ಮಾತಿನ ಮೊರೆತ..... ನಗೆಯ ಕೇಕಾರವ.....

ಸತೀಶ ಎದೆಯಾಳದಿಂದ ನಿಟ್ಟುಸಿರನ್ನು ಹೊರಹಾಕಿ ಕಾರಿಡಾರಿನಲ್ಲಿ ಹೆಜ್ಜೆ ಹಾಕುತಿದ್ದಾಗ ಎದುರಾದ ಪ್ರಾಂಶುಪಾಲರ ಮುಖವರ್ಣ ಶಟ್ಟನೆ ಕಹಿ ಉಂಡವರಂತೆ ಕಪ್ಪಿಟ್ಟಿತು. ಒಂದು ಕ್ಷಣ ನಿಟ್ಟಿಸಿ ನೋಡಿ ವಿಜಾತೀಯ

ವಾದ ದನಿಯಲ್ಲಿ ನುಡಿದರು “ನಾನು ನಿನ್ನವಳಿಗೆ ಆಶ್ರಯಕೊಟ್ಟದ್ದು ಸದ್ಭಾವನೆಯಿಂದ. ನಮ್ಮದು ಬಡಶಾಲೆ. ಇದರ ಪುರೋಭಿವೃದ್ಧಿ ಮಂತ್ರ ಮಾಟಗಳಿಂದ ಆಗುವುದಿಲ್ಲ! ಸರ್ವಾಂಗೀಣ ಬೆಂಬಲ ಮತ್ತು ಆರ್ಥಿಕಾ ಶ್ರಯಗಳಿಂದಲೇ ಆಗಬೇಕು. ಇದನ್ನು ಅರಿತೂ ಅರಿತೂ ವಿರುದ್ಧಗತಿಯಲ್ಲಿ ನಡೆಯುವುದೆಂದರೆ ?”

ಛೆ:! ಏನಿದರ ಅರ್ಥ? ವಿರುದ್ಧ ಎಂದರೇನು ?

ಸತೀಶ್ ಕಂಗಾಲಾಗಿ ತಗ್ಗಿದ ದನಿಯಲ್ಲಿ ನುಡಿದ “ನನ್ನಿಂದ ಏನು ತಪ್ಪಾಗಿದೆ ? ನನಗೆ ಇದು ಅರ್ಥವೇ ಆಗುತ್ತಿಲ್ಲ. ಏನಿದ್ದರೂ ದಯಮಾಡಿ ತಿಳಿಸಿರಿ. ತಪ್ಪನ್ನು ತಿದ್ದಿ ಸರಿಪಡಿಸಿಕೊಳ್ಳೋಣ. ನನ್ನಿಂದ ನಿಮಗೆ ನೋವಾದುದು ನನಗೆ ನಿಜಕ್ಕೂ ದುಃಖದಾಯಕ. ದಯಮಾಡಿ ಕ್ಷಮಿಸಿಬಿಡಿ.”

“ಬಿಡು....ನಿನ್ನಿಂದೇನೂ ಅಪಪ್ರಚಾರವಾಗಿಲ್ಲ. ನಿನ್ನ ಹೆಂಡತಿಯ ಕಥೆಯಿಂದ. ಆ ವಾಹಿನಿ ಪತ್ರಿಕೆಯನ್ನು ತರಿಸಿನೋಡು!”

ಸತೀಶ ನತ ಶಿರಸ್ಕನಾದ. ಎದೆಯಾಳದಲ್ಲಿ ಹೃದಯ ಮೃದಂಗ ವ್ಯಾಪ್ತಿಗೆ ಮೀರಿ ಮಿಡಿಯಿತು. ದಡ. ದಡ. ದಡ. ದಡ. ಮನದಲ್ಲಿ ಅಶಾಂತಿ–ಕಳವಳ-ತಳಮಳ.

* * * *

ಶಾಲೆಯ ಕಾರ್ಯಕಲಾಪ ಮುಗಿದು ಮನೆಗೆ ಹೊರಡುವ ತರಾತುರಿಯಲ್ಲಿದ್ದಾಗ ಜವಾನ ಬಂದು ಮುಂದೆ ನಿಂತಾಗ ಯಾರದೋ ಎಲ್ಲಿಯದೋ ನಿರೂಪ ಅವನ ಮೂಲಕ ಬಂದಿದೆ ಎಂಬುದು ತಳಕ್ಕನೆ ಹೊಳೆಯಿತು ಮನಸ್ಸಿಗೆ. ತುಟಿಗಳು ಬಿರಿಯದಿದ್ದರೂ ನಾನು ನೋಡಿದ ನೋಟವೇ ಪ್ರಶ್ನಿಸಿತು ‘ಏನು’ ಎಂಬುದನ್ನು.

“ಗೋಪಾಲರಾಯರು ನಿಮ್ಮನ್ನು ಬರಹೇಳಿದ್ದಾರೆ ?”

“ಹರೆ! ರಾಂ!” ಎಂದು ನಾನು ಒಂದು ಕ್ಷಣ ಯೋಚಿಸಿ “ಎಲ್ಲಿದ್ದಾರೆ ?” ಎಂದೆ. ಒಮ್ಮೆಗೇ ನನ್ನ ಅಂತರತರವೆಲ್ಲಾ ಸಮೂಲವಾಗಿ ಅಲುಗಾಡಿ ಹೋಯಿತು!

“ಮಹಡಿಯ ಮೇಲಿನ ಆಫೀಸ್ ಕೊಠಡಿಯಲ್ಲಿ.”

"ಸರಿ....ಈಗಲೇ ಬರುವೆ."

ತೋರುಗಾಣಿಕೆಯ ಗಂಭೀರ ಉತ್ತರ ಕೊಡುವಲ್ಲಿ ಉತ್ತೀರ್ಣಳಾದೆನೇನೋ ಹೌದು. ಆದರೆ ಅಂತರಾಳದಲ್ಲಿನ ತಳಮಳವನ್ನು ಅಂತರಾತ್ಮ ಮಾತ್ರ ಬಲ್ಲ. ಹೆಜ್ಜೆ ಹೆಜ್ಜೆಗೂ ತನುಮನಗಳು ಕುಸಿಯುತ್ತಿದ್ದುವು. ಗೋಪಾಲರಾಯರು ಶಾಲೆಯ ಧರ್ಮದರ್ಶಿಗಳು. ಹಿರಿಯ ವ್ಯಕ್ತಿಗಳಾದ ಅವರ ಕರೆ ಅಂದಮೇಲೆ ನನ್ನ ಕತೆ ಮುಗಿದಂತೆಯೇ....ಆ ಯೋಚನೆ ಬಂದೊಡನೆಯೇ ದೇಹದಾದ್ಯಂತ ನವಿರು ನಿಮಿರಿ ಸಣ್ಣ ಚಳಿ ಮೂಡಿತು. ಹೇಗೋ ಹಾಗೆ ಸಾವರಿಸಿಕೊಳ್ಳುತ್ತ ಹಾದಿ ಸವೆಸಿ ಮಹಡಿಯ ಮೆಟ್ಟಲಿನ ಬಳಿಗೆ ಬಂದಾಗ ಎದೆಗೆ ಕೈ ಹಾಕಿ ಹಿಂದಕ್ಕೆ ದಬ್ಬಿದಂತಾಯಿತು. ಮನದಲ್ಲಿ ಇಷ್ಟ ದೈವವನ್ನು ನೆನೆಯುತ್ತಲೇ ಮೆಟ್ಟಲು ಹತ್ತಿದೆ. ಗೋಪಾಲರಾಯರು ಮೇಜಿನ ಮುಂದೆ ಕುಳಿತು ಕಾಗದ ಪತ್ರಗಳ ಪರಿಶೀಲನೆಯಲ್ಲಿದ್ದರು. ಹಣೆಯ ಮೇಲೆ ತುಂತುರು ತುಂತುರಾಗಿ ಸ್ವೇದ ಬಿಂದುಗಳು ಮೂಡಿದ್ದುವು. ಬೆಳ್ಳಿ ಎಳೆಗಳಂತೆ ಮಿರುಮಿರುಗುವ ಬಿಳಿಯ ಕೂದಲು. ಎತ್ತರದ ನಿಲುವಿಗೆ ಒಪ್ಪುವಂತಹ ಮುಖಬಿಂಬ. ಸರ್ವತ್ರ ಸದಾ ಗಂಭೀರ ಪ್ರವೃತ್ತಿ..... ನಾನು ಒಂದೆರಡು ಕ್ಷಣ ಮಂತ್ರಮುಗ್ಧಳಂತೆ ನಿಂತೆ. ಆ ಕೂಡಲೇ ದಡ. ದಡ. ದಡ. ದಡ. ಮೃದಂಗ ಘೋಷ!

ಸ್ತಬ್ಧದೇಹ ಪ್ರಕೃತಿಯ ಮೇಲೆ ಸಣ್ಣ ಸುತ್ತಿಗೆಯ ಪೆಟ್ಟನಂತೆ ಬೀಳುತ್ತಿದೆ ಅದೇ ಆ ಅನುಭೂತ ಘೋಷ! ಕರ್ಣಪಟಲಗಳನ್ನು ಬಡಿದು ಭೇದಿಸುವಂತೆ ಕೇಳಿಬರುತ್ತಿರುವುದು ಎದೆಯ ನೆಲೆಯಿಂದಲೇ! ಕೆಲವು ಕ್ಷಣಗಳನಂತರ ಅದು ಹೃದಯ ಘೋಷ ಎಂಬುದರ ಅರಿವಾಯಿತು. ತನು ತತ್ತರಿಸಿದರೂ ಬಹುಕಷ್ಟದಿಂದ ಸಾವರಿಸಿಕೊಂಡೆ.

ಅವರು ನನ್ನನ್ನು ಗಮನಿಸಿದ್ದು, ಪತ್ರದ ಪರಿಶೀಲನೆ ಮುಗಿದನಂತರ. ಹುಬ್ಬೆತ್ತಿ ನೋಡಿ ಕೇಳಿದರು "ನಿಮ್ಮನ್ನು ಕರೆಸಿದ್ದು ನೀವು ವಾಹಿನಿಯಲ್ಲಿ ಪ್ರಕಟಿಸಿದ ಕತೆಗಾಗಿ."

ವಾಹಿನಿಯ ಪ್ರತಿ-ಇಷ್ಟೆಲ್ಲಾ ಗೊಂದಲವೆಬ್ಬಿಸಿದ ವಾಹಿನಿಯ ಪ್ರತಿ ನಿನ್ನೆಯಷ್ಟೆ ಕರಗತವಾದಾಗ ಮೈಯೆಲ್ಲಾ ಮನಸ್ಸಾಗಿ ಅಕ್ಷರ ಅಕ್ಷರವನ್ನೂ ಓದಿದ್ದೆ. ಸಂಪಾದಕರು ತಮ್ಮ ಮನಸ್ವೇಚ್ಛೆಯಿಂದ ಅದರಲ್ಲಿ ಅನೇಕ ಮಾರ್ಪಾಡುಗಳನ್ನು ಮಾಡಿದ್ದಾರೆ. ಕಥೆಯ ಓಟವನ್ನು ದಿಕ್ಕೆಡಿಸದೆ

ಅತ್ಯಂತ ತೀವ್ರಗಾಮಿತ್ವವನ್ನು ಮೈಗೂಡಿಸಿದ್ದೇ ಇಷ್ಟೊಂದು ರಾದ್ಧಾಂತಕ್ಕೆ ದಾರಿ. ಅದು ತುಂಬಾ ಹಳೆಯ ಕತೆ. ನನ್ನ ಪ್ರಗತಿಯ ಹಾದಿಗೆ ಮುಳ್ಳು ನೆಡಲೆಂದೇ ಇಷ್ಟು ದಿನಗಳ ನಂತರ ಪ್ರಕಟವಾಯಿತೋ ಏನೋ.....ಇದು ತೀರಾ ದುರದೃಷ್ಟಕರ. ಎಷ್ಟೆಷ್ಟು ಭಂಗ ಬವಣೆಗಳ ದುರ್ಯೋಗವನ್ನು ಅನುಭವಿಸಲಾರದೇ ಅನುಭವಿಸಿ, ಈ ಕೆಲಸವನ್ನು ವರಪ್ರಸಾದವೆಂದು ಸ್ವೀಕರಿಸಿದ್ದೆನೋ ದೇವರಿಗೇ ಗೊತ್ತು. ಹಾ, ದೈವವೇ! ಕಣ್ಣುಗಳು ತಳಕ್ಕನೆ ತುಂಬಿ ಬಂದುವು. ನಾನು ನನ್ನನ್ನು ಹತೋಟಿಯಲ್ಲಿಟ್ಟುಕೊಳ್ಳಲು ಶತ ಪ್ರಯತ್ನಪಟ್ಟೆ. ಪ್ರಯತ್ನಿಸಿದರೂ ತುಟಿಗಳು ಬಿರಿಯಲಿಲ್ಲ.

* * * *

ಸತೀಶ ಸಿಟ್ಟಿನಿಂದ ಹೇಳಿದ "ನಾನು ಎಂಟ್ಹತ್ತು ವರ್ಷಗಳಿಂದ ಈ ಶಾಲೆಗೆ ನಿಷ್ಠೆಯಿಂದ ಸೇವೆ ಸಲ್ಲಿಸಿರುವೆ. ಆಜೀವ ಪರ್ಯಂತ ಸೇವೆ ಸಲ್ಲಿಸಬೇಕೆಂಬ ಇಚ್ಛೆಯೂ ಇತ್ತು. ನೀನು ಎಲ್ಲಕ್ಕೂ ತಿಲಾಂಜಲಿ ಬಿಟ್ಟೆ.....ನನ್ನ ಮಾನ ಮೂರಾಬಟ್ಟೆಯಾಯ್ತು !"

"ನಾನೂ ಆರೇಳು ತಿಂಗಳಿಂದ ನಿನ್ನಂತೆಯೇ ನಿಷ್ಠೆಯಿಂದ ಸೇವೆ ಸಲ್ಲಿಸಲಿಲ್ಲವೇ? ಆ ಸಂಪಾದಕರು ಕತೆಗೆ ಬಣ್ಣ ಹಚ್ಚಿ ರೆಕ್ಕೆಪುಕ್ಕ ಬೆಳೆಸಿದರೆ ನಾನೇನು ಮಾಡಲಿ? ನಾನದನ್ನು ಬರೆದುದು ಕಳೆದ ವರ್ಷ. ಈ ವರ್ಷ ಪ್ರಕಟಿಸಿ ಗೊಂದಲಕ್ಕೆ ದಾರಿ ಮಾಡಿದುದು ನನ್ನ ದುರಾದೃಷ್ಟ.....ಒಂದು ವರ್ಷದನಂತರ ಅವರು ಪ್ರಕಟಿಸಬೇಕಾದ ಪ್ರಮೇಯ ಇರಲಿಲ್ಲ. ಇದರಲ್ಲಿ ನನ್ನ ತಪ್ಪು ಏನೇನೂ ಇಲ್ಲ.....ಇದನ್ನಿಷ್ಟು ನೀನು ಅರ್ಥ ಮಾಡಿಕೊಳ್ಳಬಾರದೇ?" ಎಂದು ಅನುದ್ವೇಗದಿಂದ ಸಂಕಟಪೂರ್ಣವಾದ ದನಿಯಲ್ಲಿ ಕೇಳಿದೆ.

"..........''

"ನೀನೂ ಸಹ ಅನುಮಾನಿಸುವುದಾದರೆ ನಾನೇನೂ ಹೇಳಲಾರೆ....."

ಸತೀಶ ಉದ್ವೇಗಪೂರ್ಣ ಧ್ವನಿಯಲ್ಲಿ ಒದರಿದ "ನನ್ನ ಧ್ಯೇಯೋದ್ದೇಶಗಳಿಗೆ ಕಲ್ಲು ಹಾಕಿಬಿಟ್ಟೆ. ನಾನು ತಲೆಯೆತ್ತಿ ಓಡಾಡುವಂತಿಲ್ಲ !"

"ಇದು ಖಂಡಿತ ಉದ್ದೇಶಪೂರಿತವಲ್ಲ." ಅತ್ಯಂತ ಕಳಕಳಿಯಿಂದ ನುಡಿದೆ ನಾನು.

ರುದ್ರಮೌನ ರಾಜ್ಯವಾಳಿತು. ಸತೀಶ ಅಲ್ಲಿ ನಿಲ್ಲದೆ ಸರಸರನೆ ಹೊರಟುಹೋದ. ಮುಖಬಿಂಬ ವಿವರ್ಣವಾಗಿತ್ತು. ಆತನ ನಿರ್ಗಮನ ಮಾನಸಿಕ ವಿಕ್ಷೋಭೆಯನ್ನು ದ್ವಿಗುಣಗೊಳಿಸಿತು. ನಾನು ದುಃಖ–ಕಳವಳ–ಕ್ಷೋಭೆಗಳಿಂದ ಜರ್ಜರಿತಳಾದೆ. ದೇಹದಾದ್ಯಂತ ಚಳಿಯು ಝುರಿ ಝುರ್ರನೆ ಹರಿದಾಡಿತು, ಒಮ್ಮೆಗೇ ನವಿರು ನಿಮಿರುವಂತೆ.

ನೋಟ ಮೇಜಿನ ಮೇಲಿದ್ದ ವಾಹಿನಿಯ ಮೇಲೆ ಹರಿಯಿತು. ಜೀವನದ ಹಾದಿಗೆ ಮುಳ್ಳುನೆಟ್ಟು ಹತ್ತೂ ಮುಂದಿಯ ತಿರಸ್ಕಾರಕ್ಕೆ ಕಾರಣವಾದ ಪತ್ರಿಕೆಯನ್ನು ಹರಿದು ತೂರಿಬಿಡಲೇ ಎಂಬಷ್ಟು ಅಸಮಾಧಾನ, ಆದರೆ..... ಉಳಿದ ಸಹಸ್ರಾರು ಪ್ರತಿಗಳು.....?

* * * *

ಕಮಲಿ ಒಳ ಹೆಜ್ಜೆ ಇಟ್ಟಾಗ ನಿಶ್ಶಬ್ದ–ನೀರವಗಳ ಆಗರವಾಗಿತ್ತು ಪುಟ್ಟಮನೆ. ಶೃತಿ–ಲಯಬದ್ಧವಾದ ಆ ಪಾದಗಳ ಸದ್ದು ಸಮೀಪಿಸುತ್ತಲೂ ಅತ್ತ ದೃಷ್ಟಿ ಸಹಜವಾಗಿ ಹೊರಳಿತು. ಸುಮ್ಮನೆ–ಸಹಜವಾದ ಧ್ವನಿಯಲ್ಲಿ 'ಬಾಮ್ಮಾ' ಎಂದೆ. ಧ್ವನಿ ಭಾರವಾಗಿತ್ತು. ಅವಳು ಬಳಿಯಲ್ಲಿ ಕುಳಿತುಕೊಂಡು ಅನುತಾಪಪೂರ್ಣ ವಾಣಿಯಲ್ಲಿ ನುಡಿದಳು.

"ಒಂದು ಕಥೆಯ–ಕೇವಲ ಒಂದು ಪುಟ್ಟ ಕಥೆಯ–ನಿರೂಪಣೆ ಇಷ್ಟೊಂದು ರಾದ್ಧಾಂತವೆಬ್ಬಿಸುವುದೆಂದು ಯಾರು ತಿಳಿದಿದ್ದರು? ಪ್ರಿನ್ಸಿಪಾಲ್ ಜಯಾಚಾರ್ಯರು ತನ್ನನ್ನೇ ಕುರಿತು ಬರೆದಿದ್ದೆಂದು ಪೂರ್ಣ ನಂಬಿದ್ದಾರೆ. ಹೆಚ್ಚುಕಡಿಮೆ–ಬಹುತೇಕವಾಗಿ ಪ್ರೈವೇಟ್ ಸ್ಕೂಲುಗಳಲ್ಲಿ ಇಂತಹ ವ್ಯವಹಾರ ನಡೆಯುವುದು ಸರ್ವೇಸಾಮಾನ್ಯ. ಇಂದಿನ ದುರ್ಭರ ಪರಿಸ್ಥಿತಿಯಲ್ಲಿ ಶಾಲಾ ಜೀವನ ಮಾತ್ರವಲ್ಲ; ಅದನ್ನು ನೆಮ್ಮಿಕೊಂಡವರ ಜೀವನವೂ ನಡೆಯಬೇಕು. ಅಂತಲೇ ತೆರೆಯಮರೆಯಲ್ಲಿ ಅಲ್ಪಸ್ವಲ್ಪ ಅವ್ಯವಹಾರ ನಡೆಸದೆ ವಿಧಿಯಿಲ್ಲ. ಅಂದಮೇಲೆ, ಇದನ್ನೆಲ್ಲಾ 'ಅತಿ' ಎಂದು ಯಾರೂ ಪರಿಭಾವಿಸಬಾರದು. ಆದ್ದರಿಂದ, ನೀನು ನಿನ್ನ ಕಥೆಗೆ ಈ ವಿಷಯ ಅಳವಡಿಸಿಕೊಂಡುದುದು ತಪ್ಪು ಎಂದು ನನಗೂ ಅನಿಸುತ್ತೆ. ಕ್ಷಮಿಸು..... ಆದರೆ....." ಎಂದು ಮಾತನ್ನು ಅಷ್ಟಕ್ಕೇ ನಿಲ್ಲಿಸಿ ಉಗುಳು ನುಂಗಿದಳು.

"ಏನಿದ್ದರೂ ಹೇಳಿಬಿಡು, ಮುಚ್ಚಿಡುವುದೇಕೆ ?"

ಪ್ರಶ್ನೆ ಆತುರ-ಕಾತರಗಳಿಂದ ಹೊರಬಿತ್ತು; ನನ್ನ ಅಂತರತರವೆಲ್ಲಾ ವಿವರ್ಣವಾದುದನ್ನು ಆಕೆ ಮುಖಭಾವದಲ್ಲಿ ಗ್ರಹಿಸಿದಳೇನೋ.....ಸ್ವಲ್ಪ ನಿಧಾನಿಸಿ ಒಣಗಿ ಶುಷ್ಕವಾದ ತುಟಿಗಳನ್ನು ನಾಲಿಗೆಯಿಂದ ಒರಿಸಿಕೊಂಡು ನುಡಿದಳು "ಕೇಳು, ಇಂದು ಯಾವ ಶಾಲಾಕಾಲೇಜುಗಳೂ ಪಾವಿತ್ರ್ಯವನ್ನು ಕಾಪಾಡಿಕೊಂಡು ಬಂದಿಲ್ಲ. ಎಲ್ಲಾ ಯೂನಿವರ್ಸಿಟಿಗಳೂ ಪಾಪ ಕೂಪಗಳಾಗಿವೆ. ಸರಸ್ವತೀ ಆರಾಧಕರು ಲೋಕದ ದೃಷ್ಟಿಗೆ ಗಣ್ಯರು ! ಅವರ ಎದೆಯಾಳದಲ್ಲಿನ ಕಳಂಕವನ್ನು ಬಲ್ಲವರೇ ಬಲ್ಲರು ! ಅಂದಮೇಲೆ ಈ ಕತೆಯನ್ನು ಒಂದು ದೊಡ್ಡ ವಿಷಯವನ್ನಾಗಿ ಮಾಡಿ ಹಗರಣವೆಬ್ಬಿಸಿದುದು ನನಗೆ ಸರಿ ಕಾಣಲ್ಲಿಲ್ಲ. ನಾನೊಮ್ಮೆ ಜಯಾಚಾರ್ಯರನ್ನು ಕಂಡು ಮಾತಾಡಲೇ ಎಂದು ಯೋಚಿಸುತ್ತಿರುವೆ....."

ಅವಳ ಮೃದು ಹಸ್ತಗಳನ್ನು ಅದುಮಿ ಹಿಡಿದುಕೊಂಡು ನುಡಿದೆ "ಕಮಲೂ ! ನೀನೀಗ ಪುನಃ ಪ್ರಸ್ತಾಪಿಸಿದರೆ–ವಿಷಯವನ್ನು ಪುನಃ ಎತ್ತಿದರೆ ಮಲಗಿದ ಹಾವನ್ನು ಬಡಿದೆಬ್ಬಿಸಿದಂತಾದೀತು... ನಾವು ಸುಮ್ಮನಿದ್ದುಬಿಟ್ಟರೆ ಹಾಗಿಂದ್ಹಾಗೇ ಅಡಗಿಹೋದೀತೇನೋ....?"

"ಇರಬಹುದು....ಅದೂ ಒಳ್ಳೆಯದೆ."

"ದೇವರಿದ್ದಾನೆ....ಅವನೇ ಪಾಪ-ಪುಣ್ಯಗಳನ್ನು ನೋಡಿಕೊಳ್ಳತಕ್ಕವನು."

"ಅದು ಸರಿಯೆ."

* * * *

ನ್ಯಾಯ-ನೀತಿ-ಧರ್ಮ ಇಂತಿಂತಹ ಅಮೂಲ್ಯ ಶಬ್ದಗಳಿಗೆ ಅರ್ಥವೇ ಇಲ್ಲವೋ ಅಥವಾ ನಮ್ಮ ಎದೆಯ ನಿಘಂಟು ಭರಿಸಲಾರದೋ ಊಹಿಸಿ ಹೇಳಲಾರೆ. ಅಂತರ್ಯದಲ್ಲಿ ಏನೋ ಒಂದು ಬಗೆಯ ಕಿನಿಸಿಗೆ. ಇನ್ನೇನೋ ಒಂದು ಬಗೆಯ ಪರಿತಾಪ.....ಅಸಮಾಧಾನ-ಅಶಾಂತಿಗಳಿಂದ ತುಂಬಿ ಪರಿತಪಿಸುತಿತ್ತು ಮನಸ್ಸು. ಶಾಲೆಗೆ ರಜೆ ಹಾಕಿ ಮೂರು ದಿನಗಳು ಸಂದುವು.

ರಜೆ ಮಂಜೂರಾಯಿತೋ, ಇಲ್ಲವೋ ಅಥವಾ ಡಿಸ್‌ಮಿಸ್ ಆರ್ಡರ್ ಬರಲಿದೆಯೋ ದೇವರಿಗೇ ಗೊತ್ತು !

ಸತೀಶ್ ಮೈಸೂರಿಗೆ ಹೋದವನಿನ್ನೂ ಹಿಂದಿರುಗಿ ಬರಲಿಲ್ಲ. ಅವನಿಲ್ಲದೆ ಮನೆ-ಮನಸ್ಸು ಎರಡೂ ಬಣಬಣ. ಈ ದಿನವೆಲ್ಲಾ ಮುಚ್ಚಿದ ಕದ ತೆರೆಯಲಿಲ್ಲ. ಅಡಿಗೆಗೂ ಕೈಹಚ್ಚಲು ಮನಸ್ಸು ಒಪ್ಪದುದರಿಂದ ಬ್ರೆಡ್ಡಿನ ತುಣುಕುಗಳನ್ನು ನುಂಗಿ ಹಸಿವು ಹಿಂಗಿಸಿಕೊಂಡೆ. ಅಂಗಡಿಯಿಂದ ಪತ್ರಿಕೆಯನ್ನು ಕೊಂಡು ತರುವ ಇಚ್ಛೆಗೂ ಇಂಬುಕೊಡಲಿಲ್ಲ ಮನಸ್ಸು. ಹಾಸಿಗೆಯ ಮೇಲೆ ಅಡ್ಡಾಗಿ ಮಾಡಿನ ಹೆಂಚುಗಳನ್ನು ಎಣಿಸುವ ಮಹಾಕಾರ್ಯದಲ್ಲಿ ಮೈಮರೆತೆ. ಹೊತ್ತು ಉರುಳಿತು.....ಟಿಕ್. ಟಾಕ್. ಗಡಿಯಾರದೊಡನೆ ಸ್ಪರ್ಧೆ ಹೂಡಿ.

* * * *

ಮುಚ್ಚಿದ ಬಾಗಿಲ ಆಚೆ ಯಾರದೋ, ಎಲ್ಲಿಯದೋ ನಗೆಯ ಕೇಕಾರವ. ಅದನ್ನು ಸಂತಸದ ಹೊನಲು ಎನ್ನುವುದಕ್ಕಿಂತ ಅಣಕದ ಹೊನಲು ಎನ್ನಬಹುದೇನೋ....ಎನ್ನುತ್ತಿದೆ ಅಂತರಂಗದ ಬೌದ್ಧಿಕ ತೂರ್ಯವಾಣಿ. ಒಂದೆರಡು ಗಳಿಗೆಗಳು ಗಮನಕ್ಕೆ ಬಾರದೆ ಉರುಳಿಹೋದುವು. ಹೃದಯ ತುಂತುಗಳಲ್ಲಿ ಬಳಬಳನೆ ಸಂಜನಿಸಿದ ಶೋಕವಾರಿ ಕಣ್ಣುಗಳಲ್ಲಿ ಕಂಬನಿಯಾಗಿ ಹರಿಯಿತು....

ಅಂದು, ಮಹದ್ಭವಿಷ್ಯಕ್ಕೆ ಸಿದ್ಧವಾದ ಜೀವ ಲೇಖನಕೃಷಿಯನ್ನು ಎಷ್ಟೊಂದು ಶ್ರದ್ಧೆಯಿಂದ ಕೈಗೂಡಿಸಿಕೊಂಡಿತ್ತು ? ಒಂದೊಂದು ಕತೆ ಕಾದಂಬರಿಗಳು ಸುಂದರವಾಗಿ ರೂಪು ತಳೆದು ಕರಿಯಕ್ಷರಗಳಲ್ಲಿ ಒಡಮೂಡಿದಾಗ ಉಂಟಾದ ಆನಂದಕ್ಕೆ ಎಣೆಯಿತ್ತೇ? ಅವು ಪ್ರಕಾಶಗೊಳ್ಳುವ ಮಾತು ಬೇರೆ....ಸಾಧ್ಯಾಸಾಧ್ಯತೆಗಳೇನೇ ಇರಲಿ, ಆ ಸತ್ಯಸುಂದರವಾದ ಬರವಣಿಗೆ ? ಹಿರಿಯ ವೃಂದ–ಗೆಳೆಯವೃಂದ ಒಮ್ಮನದಿಂದ ಅಭಿನಂದಿಸಿ ಆನಂದವೃಷ್ಟಿಯನ್ನು ಕರೆದ ಬಗೆ ಹೃದಯಕರಂಡದಲ್ಲಿ ಕೈಯಾಡಿಸಿತು ; ಆನಂದಭಾಷ್ಪಗಳನ್ನು ನಯನಕೋರಕಗಳಲ್ಲಿ ತುಳುಕಿಸುವಂತೆ. ಅಲ್ಲ, ಅಲ್ಲವೇ ಅಲ್ಲ. ದುಃಖವಾರಿಯನ್ನು ಚಿಮ್ಮಿಸುವಂತೆ.

ಹಗಲು ಉರುಳಿತು ; ಇರುಳು ಅಡರಿತು.

ಸತೀಶನಿಗಾಗಿ ಕಾದ ಕಣ್ಮನಗಳು ಸೋತುಹೋದುವು. ನಿನ್ನೆಯೇ ಬರಬೇಕಾಗಿದ್ದ ವ್ಯಕ್ತಿ ಇನ್ನೂ ಬರಲಿಲ್ಲವಾಗಿ....ಎದೆಯಾಳದಲ್ಲಿ ಏನೋ

ಒಂದು ಬಗೆಯ ತಳಮಳ. ಯಾವುದೋ ಕಂಡರಿಯದ ಪಿಶಾಚ ಹಸ್ತ ಹೃದಯವನ್ನು ಹಿಸುಕುತ್ತಿದೆ....ಯಾಕೋ, ಏನೋ ಈ ಅರ್ಥಹೀನ ಕಳ ವಳಕ್ಕೆ ಇಂಬು ಕೊಡಬಾರದೆಂದು ಪ್ರಯತ್ನಿಸಿದರೂ ನಾನು ಈ ದಿಶೆಯಲ್ಲಿ ಜಯಶೀಲಳಾಗಲಿಲ್ಲ. ತನುಮನಗಳು ಒಳಗಿಂದೊಳಗೇ ತತ್ತರಿಸಿದುವು.

ಟಪ್ಪಾಲಿನವ ಕಾಗದವೊಂದನ್ನು ಕಿಟಕಿಯಲ್ಲಿ ತೂರಿಹೋಗಿದ್ದ. ಒಡೆದು ಓದಿದೆ. ಸತೀಶನ ಸ್ವಹಸ್ತಾಕ್ಷರ. ಅದರಲ್ಲಿ ಇದ್ದುದು ಎರಡೇ ಪಂಕ್ತಿ.

ನನ್ನ ಒಂಭತ್ತು ವರ್ಷಗಳ ನಿಸ್ವಾರ್ಥ ಸೇವೆ ಮತ್ತು ಜೀವನ ಧ್ಯೇಯ ಎರಡಕ್ಕೂ ನೀನು ಇಷ್ಟೊಂದು ಸುಲಭವಾಗಿ ಮಸಿ ಬಳಿಯುತ್ತೀ ಯೆಂದು ನಾನು ನಂಬಿರಲಿಲ್ಲ.....Good bye !

ದೂರದ ಮರದ ಮೇಲೆ ಕೋಗಿಲೆ ಕೂಗುತಿತ್ತು ಕೂಊಊಊವೂ ! ಕೂಊಊಊವೂ !



# ಮರೀಚಿಕೆ

## ೬

**ಅಚಿಂತಿತಾನಿ ದುಃಖಾನಿ ಯಥೈವಾಯಾಂತಿ ದೇಹಿನಾಂ ।**
**ಸುಖಾನ್ಯಪಿ ತಥಾ ಮನ್ಯೇ ದೈನ್ಯ ಮತ್ರಾತಿರಿಚ್ಯತೇ ॥**

ನೀತಿ ನಿಯಮಗಳ ಸುಂದರ ಚೌಕಟನಲ್ಲಿ ಅದ್ಭುತ ಯೋಜನೆಯನ್ನು ಹೂಡಿ ಲೋಕಾಭಿರಾಮ ಭಂಗಿಯಲ್ಲಿ ಬಾಲರವಿ ಬಾನೇರ ತೊಡಗಿದಾಗ ಭುವನ ಮಂಡಲವೆಲ್ಲ ದಿನಚರಿಯನ್ನು ಆಚರಿಸತೊಡಗಿತು ನವ ಹುರುಪಿನಿಂದ. ಗಗನಾಂಗಣದಲ್ಲಿ ನಿರ್ಜಲ-ನಿರ್ಮಲ ಮೋಡಗಳ ಮಾಲೆ ಚಿತ್ರವಿಚಿತ್ರ ವೈಖರಿಯಲ್ಲಿ ಉತ್ಸಾಹದಿಂದ ಅನಂತ ಪಯಣದಲ್ಲಿ ಮೈಮರೆತಿವೆ; ಎಣೆಯಿಲ್ಲದ-ಕೊನೆಯಿಲ್ಲದ ನಿರ್ಧೂಮ ಪ್ರವಾಹ.

ಕಿಟಕಿಯಲ್ಲಿ ಮೈಚಾಚಿದ ಬಿಸಿಲ್ಗೋಲುಗಳು ಮುಖವನ್ನು ಬೆಚ್ಚಗೆ ಮುದ್ದಿಟ್ಟಾಗ ಪರಶುರಾಂ ಹಾಸಿಗೆಯಿಂದ ಏಳಲಾರದೆ ಎದ್ದು ಪ್ರಾತರ್ವಿಧಿಯನ್ನು ಕೈಕೊಂಡ. ಸೊಂಟದ ಕೀಲು ಕಳಚಿಕೊಳ್ಳುವಂತೆ, ನರನರಗಳೂ ಕಟ್ ಕಟ್ಟನೆ ತುಂಡುಗಡಿಯುತ್ತಿರುವಂತೆ, ಖಂಡ ಖಂಡಗಳೂ ಒಡೆಯುತ್ತಿರುವಂತೆ ನೋವು-ಸಹಿಸಲಾರದು ನೋವು. ದೇಹ ಭಾರಾತಿಭಾರ.

ಆಸ್ಪತ್ರೆಯನ್ನು ಸೇರಿ ಆಗಲೇ ತಿಂಗಳೆರಡಾಗಿವೆ. ಔಷಧಿ-ಪಥ್ಯಗಳೂ ನಡೆಯುತ್ತಿವೆ. ಆದರೂ, ರೋಗ ಹಿಂಜರಿಯದು, ದೇಹ ಭಾದೆ ತಪ್ಪದು.

ಸದಾ ಔಷಧಿ ಲೋಷನ್‌ಗಳ ಕಟುವಾಸನೆ, ಶೌಚದ ಮನೆಯ

ಮಾಲಿನ್ಯ ಅಂತರಂಗವನ್ನು ತಟ್ಟುತಿದ್ದರೆ ಮನೆಗೆ ಹೋಗಿಬಿಡಲೇ ಎಂಬಷ್ಟು ಕಿನಿಸಿಗೆ.

ಆದರೆ.....ಆ ಮನೆಯೂ ಇನ್ನೊಂದು ರೀತಿಯ ನರಕ. ಶಾಂತಿ-ಪ್ರೀತಿಗಳು ಹೊಸ್ತಿಲಿಂದ ಹೊರಗೆ. ಸುಖ-ಸಂತೋಷಗಳು ಮೈಲಿ ದೂರ. ಎಲ್ಲಿ ಹೆಜ್ಜೆಯಿಟ್ಟರೂ ಅಲ್ಲಿ ತೊಡಕು; ಎಲ್ಲಿ ಯೋಜನೆ ಹೂಡಿದರೂ ಅಲ್ಲಿ ಕತ್ತರಿ. ಹೊತ್ತು ಕಳೆಯುವ ಭಂಗ ದೇವರಿಗೇ ಸಂವೇದ್ಯ. ಕೆಲವೊಮ್ಮೆ ನೆರೆ ಹೊರೆಯವರೂ, ಆತ್ಮೀಯ ಬಂಧುಗಳೂ, ಇಬ್ಬರು ಹೆಣ್ಣು ಮಕ್ಕಳೂ ಬಂದು ಸಾಂತ್ವನದುಂಬಿದ ಮಾತಿನ ಮಳೆಗರೆದು ಹೋಗುವುದುಂಟು. ಅದೆಲ್ಲಾ ತಾಸು-ಅರೆತಾಸಿನ ವ್ಯವಹಾರ. ಅನಂತರ ಮನೆ-ಮನಸ್ಸು ಎರಡೂ ಬಣ ಬಣ. ದೇಹ ಭಾರವಾದವರಿಗೆ ದೇವರು ಯಾಕಾದರೂ ಆಯುಸ್ಸು ಕೊಡುತ್ತಾನೋ ಎಂದು ಮರ್ಮರ ಮರಗುತ್ತದೆ ಮನಸ್ಸು.

ಪರಶುರಾಂ ಹೊರಬಂದು ವರಾಂಡದಲ್ಲಿ ಕುಳಿತುಕೊಂಡ. ದೃಷ್ಟಿಯ ಕಕ್ಷೆಯಲ್ಲಿ ಎಂತಹ ಸುಂದರ ಜಗತ್ತು! ಅದರ ರೂಪು-ರೇಷೆ, ನೀತಿ-ನಿಯಮ, ಪ್ರತಿಕ್ರಿಯೆ ಎಂತಹ ಸತ್ಯ ಸುಂದರ! ಅದರ ಚೌಕಟ್ಟಿನಲ್ಲಿಯೇ ಬದುಕಿ ಬಾಳುತ್ತಿರುವ ಮಾನವ ವರ್ಗ? ವಿದ್ಯೆ-ಬುದ್ಧಿ-ಜ್ಞಾನ-ವಿಜ್ಞಾನಗಳ ಸಂಗರವಾದ ಮಾನವ ವರ್ಗ??

ಅದನ್ನು ಯೋಚಿಸಿಕೊಳ್ಳಲೂ ಈಗ ಅಸಹ್ಯ ಪಡುತ್ತದೆ ಮನಸ್ಸು.

ಅಂದು, ತನ್ನ ಪ್ರವರ್ಧಮಾನ ಕಾಲದಲ್ಲಿನ ಜೀವನ–ತುಂಬ ಜೀವನ ಇದ್ದ ಬಗೆ? ಈಗ ಎಲ್ಲರ ತಿರಸ್ಕಾರದ ವಸ್ತು ಅಥವಾ.....ಅಷ್ಟು ಸರಿಸಮಾನವಾದ ಶಬ್ದವೇ ದೊರೆಯುದಲ್ಲಾ ಎಂದು ತನ್ನೊಳಗೇ ಕೊರಗಿತು ಮನಸ್ಸು.

ಪಕ್ಕದ ಹೋಟೆಲಿಂದ ಹೊತ್ತು ಹೊತ್ತಿಗೂ ಎರಡೆರಡು ಇಡ್ಲಿ ಕಳಿಸಿ ಕೊಡಲು ಹೋಟೆಲಿನ ಮ್ಯಾನೇಜರಿಗೆ ತಿಳಿಸಿದ್ದ ಮಗ. ಅದೇ ಪ್ರಕಾರ ಇಡ್ಲಿ ಚಹವನ್ನು ಮಾಣಿ ತಂದುಕೊಡುತಿದ್ದುದರಿಂದ ಮನೆಯವರಿಗೆ ತಿಂಡಿ-ಊಟಗಳನ್ನು ಹೊರುವ ಕಷ್ಟವಿರಲಿಲ್ಲ. ಯಾವಾಗಾದರೊಮ್ಮೆ ವಿಚಾರಿಸಿಕೊಂಡು ಹೋದರೆ ಮುಗಿಯಿತು-ಇದು ಇಂದಿನ ಸಂಸಾರ.

ಮುಖಬಿಂಬದಲ್ಲಿ ಕಡು ಚಿಂತೆಯ ಅಲೆ ಅಲೆ ಅಲೆಯಾಗಿ ಹರಿದಾಡಿ ಹೋಯಿತು.

ಆಸ್ಪತ್ರೆಗೆ ಬಂದು ಸೇರಿದ್ದಾಗಿದೆ. ಭಗವಂತ ಇಲ್ಲಿಂದಲೇ ನನ್ನ ಕರೆದೊಯ್ದರೆ ಸಾಕು. ನನಗಿನ್ನು ಬದುಕು ಬೇಡವೇ ಬೇಡ. ದುರ್ವಿಧಿ ನನ್ನ ಸತಿಯನ್ನು ಕರೆದೊಯ್ಯುವುದಕ್ಕಿಂತ ನನ್ನನ್ನೇ ಒಯ್ದಿದ್ದರೆ ಎಷ್ಟೊಂದು ತಣ್ಣಗಿರುತಿತ್ತು ಈ ಜೀವಕ್ಕೆ? ಸಮಾಜಕ್ಕೂ ಕರುಣೆಯಿಲ್ಲ. ದೈವಕ್ಕೂ ಕರುಣೆಯಿಲ್ಲ.

ಆದರೆ.....?

ಹೆಣ್ಣಾದ ಸತಿ ಬದುಕಿದ್ದಿದ್ದರೆ ಎಷ್ಟು ಕಷ್ಟಪಡಬೇಕಿತ್ತು ? ಪಾಪ, ತುಂಬಾ ನಲುಗಿದ ಹೆಣ್ಣು ಹೋಗಿದ್ದೇ ಒಳ್ಳೆಯದಾಯಿತು. ತಣ್ಣಗಿರಲಿ ಆತ್ಮ. ಮಕ್ಕಳಿಗೆ ವಿದ್ಯೆ-ಮದುವೆ-ಮನೆ ಕಟ್ಟುವಿಕೆ ಮುಂತಾದ ಹೊಣೆಗಾರಿಕೆಯಿಂದ ಅವಳನ್ನು ಸುಖವಾಗಿರಿಸಲು ಸಾಧ್ಯವಾಗಲೇ ಇಲ್ಲ; ಅವಳೂ ಸಹ ಸುಖವನ್ನು ಬಯಸಲಿಲ್ಲ; ಕೈತುಂಬಾ ದುಡಿದು ತಣ್ಣಗೆ ಕಣ್ಣು ಮುಚ್ಚಿದಳು. ದೇವರು ಕರುಣೆದೋರಿದ. ಆ ಕರುಣೆ ನನಗೂ ಸಲ್ಲುವುದೇ ?

ನೆಟ್ಟ ನೋಟ ಗಗನದೆಡೆಗೆ ಹರಿಯಿತು. ದೂರ ದಿಗಂತದಲ್ಲಿ ಕಪ್ಪಗೆ ಕರಿಯ ಚುಕ್ಕಿಗಳಂತೆ ಹಾರಾಡುತ್ತಿವೆ ಕಾಮಳ್ಳಿಗಳ ಹಿಂಡು. ಅವುಗಳ ಬಾಳು ಎಷ್ಟು ಸತ್ಯ ಸುಂದರ ?

* * * *

ಪರಶುರಾಂ ಜಗಲಿಯಿಂದ ಎದ್ದು ವಾರ್ಡಿಗೆ ಹೋದ. ಸಾಲಾಗಿ ಮಲಗಿದ ರೋಗಿಗಳು. ಜೀವಶ್ಯವವಾದ ಶರೀರದೊಂದಿಗೆ ಹೋರಾಡುವ ಪ್ರಾಣವಾಹಿನಿಯ ಸಂಕಟ-ನರಳುವಿಕೆ. ನಿದ್ರೆಯಿಲ್ಲದ ರಾತ್ರಿ. ಶಾಂತಿಯಿಲ್ಲದ ಹಗಲು. ಒಂದೊಂದು ಗಳಿಗೆಯನ್ನೂ ನರಕಮಯಗೊಳಿಸುತ್ತವೆ. ಬಾಗಿಲ ಕಡೆ ಮೊಗಮಾಡಿ ಮಲಗಿದ. ಜಗಲಿಯಲ್ಲಿ ಓಡಾಡುವ ದಾದಿಯರು, ನರ್ಸ್‌ಗಳು, ವಾರ್ಡ್‌ಬಾಯ್‌ಗಳು, ಡಾಕ್ಟರುಗಳು ದೃಷ್ಟಿಗೆ ಬೀಳುವುದರಿಂದ ಹೊತ್ತು ಕಳೆಯುವುದು ಸುಲಭ.

ಹಾಗೇ ಮನವನ್ನು ಗತಕಾಲಕ್ಕೆ ಹರಿಯಬಿಟ್ಟ.

ಮಡದಿಯೊಂದಿಗೆ ಮಕ್ಕಳನ್ನು ಕರೆದುಕೊಂಡು ಪಾಂಡುರಂಗನ ದೇಗುಲಕ್ಕೆ ಹೋಗಿ ಮಗ-ಬಾಲಕೃಷ್ಣನನ್ನು ಕಳೆದುಕೊಂಡ ಬಗೆ ಚಲನ ಚಿತ್ರದಂತೆ ಸುಳಿಸುಳಿದಳಿಯಿತು. ಆರುವರ್ಷದ ಬಾಲಕೃಷ್ಣ ಆ ಜನಸಂದಣಿ

ಯಲ್ಲಿ ಕಣ್ಮರೆಯಾದಾಗ ಎಷ್ಟೆಷ್ಟು ಪ್ರಯತ್ನಿಸಿದರೂ ಸಿಗಲೇ ಇಲ್ಲ. ಯಾರು ಕದ್ದೊಯ್ದರೋ ದೇವರಿಗೇ ಗೊತ್ತು. ಮಗ ಬದುಕಿದಾನೋ ಇಲ್ಲವೋ ಅದೂ ಸಹ ತಿಳಿಯದು. ಮಗುವಿನ ಫೋಟೋ ಸಹಿತ ಪರರಾಜ್ಯ ಗಳಿಗೂ ಹೋಗಿ ಹುಡ್ಹುಕುಡುಕಿ ಸುಸ್ತಾದರೂ ಮಗನ ಸುಳಿವು ಸಿಗಲಿಲ್ಲ. ಪಾಂಡುರಂಗನ ದರ್ಶನದಿಂದ ಮಗನನ್ನು ಕಳೆದುಕೊಂಡ ದುರದೃಷ್ಟಕರ ಪ್ರಸಂಗ ಚಿತ್ತ ಭಿತ್ತಿಯಲ್ಲಿ ನೆಲೆಸಿಂತಿತು. ಮೆಲ್ಲನೆದ್ದು ತನ್ನ ಬ್ಯಾಗಿನಲ್ಲಿದ್ದ ಚಿತ್ರಪಟಗಳನ್ನು ತೆಗೆದು ನೋಡಿದ. ಬಾಲಕೃಷ್ಣನೊಂದಿಗೆ ಕುಳಿತಿದ್ದ ಪ್ರಾಯದ ಮಡದಿ ಪಂಕಜ. ಇನ್ನೊಂದರಲ್ಲಿ ಹೆಣ್ಣುಮಕ್ಕಳಾದ ಸರೋಜ ಮತ್ತು ವನಜ ಕೊನೆಯ ಮಗನಾದ ರಾಧಾಕೃಷ್ಣನೊಂದಿಗೆ ತಾವಿಬ್ಬರೂ ಇರುವ ಚಿತ್ರ. ಮತ್ತೊಂದು ಬಾಲಕೃಷ್ಣ ಒಬ್ಬನೇ ಇರುವ ಚಿತ್ರ.

ಆ ಮಗನ ಚಿತ್ರವನ್ನೇ ನಿಟ್ಟಿಸಿ ನೋಡಿದ... ಅವನೂ ಇದ್ದಿದ್ದರೆ ಸ್ವಲ್ಪ ಸಹಾಯವಾಗುತಿತ್ತೋ ಏನೋ. ಪಾಂಡುರಂಗ ತನ್ನ ದರ್ಶನಾಕಾಂಕ್ಷಿ ಯಾಗಿ ಬಂದವರಿಗೆ ಕರುಳ ಕುಡಿಯನ್ನೇ ಕತ್ತರಿಸಿಕೊಂಡ. ಈಗ ಆ ಮಗು ಜೀವಂತ ಇದೆಯೋ, ಇದ್ದರೆ ಸುಖವಾಗಿದೆಯೋ ಕಷ್ಟದಲ್ಲಿದೆಯೋ ದೇವ ರಿಗೇ ಗೊತ್ತು. ಬಲಗೈಯಲ್ಲಿ ಹಚ್ಚೆ ಹೊಯ್ದಂತೆ ಅಚ್ಚೊತ್ತಿದ್ದ ಹರವಾದ ಮಚ್ಚೆ ಮುದ್ದು ಮುದ್ದಾದ ಗಲ್ಲದಲ್ಲಿ ಸುಂದರವಾದ ಗುಳಿ. ದುಂಡನೆಯ ಸುಂದರವಾದ ಸುನೇತ್ರಗಳು, ಚಿತ್ರಕಾರನ ಕುಂಚಕ್ಕೆ ಆರಿಸುವಂತಹ ಮಾಟವಾದ ಮುಖ, ಕಿವಿಯ ಹಿಂಬದಿಯಲ್ಲಿ ಕರ್ರಗೆ ಮರ್ಮಾಂಸ ಬೆಳೆದಂತೆ ಉಬ್ಬಿನಿಂತಿದ್ದ ಕೃಷ್ಣಮಚ್ಚೆ.....ಇವು ಮಗನ ವಿಶೇಷ.

ಅಂದು, ಬಾಲಕೃಷ್ಣ ಒಲೆಯಬಳಿ ಎಡವಿಬಿದ್ದು ಎಡಮುಂಗೈಯನ್ನು ಸುಡುಬೆಂಕಿಗೆ ಊರಿದಾಗ ಸುಟ್ಟ ಕೈಯೇ ಮುರುಟಹೋಗಬೇಕಾಗಿತ್ತು. ಭಗ ವಂತ ಅದರಲ್ಲಿ ಕಾಪಾಡಿದ್ದ. ಆದರೇನು ? ಆಗ ಅದರ ಉರಿಯಿಂದ ಎಳೆ ದನಿಯ ಚೀರಾಟ ; ಅದು ಮಾಯುವಾಗಿನ ಗೋಳು ಒಂದೊಂದೂ ಸ್ಮೃತಿ ಪಥದಲ್ಲಿ ಚಿತ್ರವತ್ತಾಗಿ ಸುಳಿದಳಿದುವು. ಸುಟ್ಟ ಗಾಯ ಹಿರಿದಾದುದರಿಂದ ಮಾಯಲು ಎರಡು ಮೂರು ತಿಂಗಳೇ ಬೇಕಾದುವು.

ಪರುಶುರಾಂ ನೀಳವಾದ ನಿಟ್ಟುಸಿರು ಬಿಟ್ಟ. ನೆತ್ತರಿನ ಒತ್ತಡದಿಂದ

ನರನರಗಳೂ ಸೀಳಿಹೋಗುವಂತಿದ್ದುವು. ದೈನ್ಯಭಾವ ತುಂಬಿದ ದೃಷ್ಟಿ ಏನನ್ನೂ ನೋಡದಷ್ಟು ಸ್ತಬ್ಧವಾಯಿತು.

* * * *

ಕನಕರಾಗರಂಜಿತ ಸಂಧ್ಯಾಸಮಯದಲ್ಲಿ ಅಂತರ್ಮುದಾವಸ್ಥ ಶೀತ ಶೀತಲ ವಾಯುವಿನ ಧೃತಗತಿಯ ಸಂಚರಣ. ಮೈ ಚರ್ಮ ಚಿಟಚಿಟ ಬಿರಿಯುವಂತಹ ಚಳಿಯ ಕೊರೆತ.

ಎಷ್ಟೆಷ್ಟು ಪ್ರಯತ್ನಿಸಿದರೂ ಹೇಮಂತ ಪ್ರಭುವಿನ ಶೀತಲ ಕೈಗಳ ಮುದ್ದು ಪ್ರಾಣಕ್ಕೇ ಕಂಟಕ. ಮೈಮೇಲಿನ ಹಳೆಯ ಶಾಲನ್ನು ಎಳೆದೆಳೆದು ಹೊದ್ದುಕೊಂಡಷ್ಟೂ ಪರಪರನೆ ಹರಿಯುತ್ತದೆ. ಎಂದೋ, ಯಾವಾಗಲೋ ಕೊಂಡದ್ದು. ಈಗ ಕಾಸಿಲ್ಲದೆ ಬರಿದಾದ ಕೈಗಳು. ಮಕ್ಕಳು ಎಲ್ಲಾ ರೀತಿಯಿಂದಲೂ ಪ್ರವರ್ಧಮಾನದಲ್ಲಿದ್ದಾರೆ. ಇದರ ಕಡೆ ಲಕ್ಷ್ಯ ಯಾರಿಗಿದೆ? ಚಳಿಯ ಕೊರೆತಕ್ಕೆ ಕೀಲುಕೀಲುಗಳೂ ಕಳಚಿಕೊಳ್ಳುವಂತಹ, ನರನರಗಳೂ ತುಂಡುಗಡಿಯುವಂತಹ ಚಳಿಯ ಕೊರೆತ. ತಾಳಲಾರೆ ಎಂದು ಗೀಳಿಡುತ್ತದೆ ಜೀವ; ನರಳುತ್ತದೆ ಮನಸ್ಸು.

ಪರಶುರಾಂ ಹೋಗಿ ಹಾಸಿಗೆಯನ್ನು ಸೇರಿ ಹೊದ್ದಿಕೆಯನ್ನು ಮೈಮೇಲೆ ಎಳೆದುಕೊಂಡ. ಅಲ್ಲಿಗೂ ಕಡಿಮೆಯಾಗದ ಚಳಿ. ಹೊರಜಗತ್ತಿನಲ್ಲಿ ಎಳೆ ಮಂಜು ಮುಸುಗುತ್ತಿದೆ. ನಿಶಾರಾಣಿ ಕಾಲೂರಲು ಹವಣಿಸುತಿದ್ದಾಳೆ.

ಕೆಲವು ದಿನಗಳಿಂದ ಮಕ್ಕಳ ಸುಳಿವೇ ಇಲ್ಲ. ಈಗ ಇಳಿವಯಸ್ಸಿನ ಮುದುಕನ ನೆನಪು ಯಾರಿಗಾದರೂ ಬೇಕು?

ಪ್ರಶ್ನೆ ಏಳುತ್ತಲೂ ಎದೆಯಾಳದಿಂದ ನಿಟ್ಟುಸಿರೊಂದು ತಪ್ಪಿಸಿಕೊಂಡಿತು. ಹೃದ್ದೇಶದ ಹೊಂಗಿಂಡಿಯಲ್ಲಿ ಆವಾವ ಭಾವಾಮೃತ ಪ್ರಧಾನವಾಗಿತ್ತೋ! ಬತ್ತಿದ ಕಣ್ಣುಗಳಲ್ಲೂ ಮುತ್ತಿನಂತಹ ಕಂಬನಿಗಳು ಉತ್ತರೀಯದ ಮೇಲೆ ಹರಿದು ಅಲ್ಲಿಯೇ ಹಿಂಗಿದುವು. ಮರುಗಳಿಗೆಯಲ್ಲಿ ತನ್ನನ್ನು ತಾನೇ ನಿಗ್ರಹಿಸಿ ಹತೋಟಿಯಲ್ಲಿಟ್ಟುಕೊಂಡ.

ಹೋಟೆಲಿನ ಮಾಣಿ ಇನ್ನೂ ಇಡ್ಲಿ ತಂದಿರಲಿಲ್ಲ. ಬೇಗನೆ ತಂದರೆ ಹೊಟ್ಟೆಗೊಂದಿಷ್ಟು ಹಾಕಿ ನಿದ್ದೆ ಮಾಡುವ ಯೋಚನೆ. ಆದರೆ, ಆ ನಿದ್ದೆಯೂ

ವಂಚಿಸುತ್ತದೆ; ಎಷ್ಟು ಬೇಡಿ ಕಾಡಿದರೂ ದೂರದೂರ ನಿಂತು ಅಣ ಕಿಸಬೇಕೆ ನಿದ್ದೆ ಎಂಬ ಅದ್ಭುತ ಆಲೋಕ.....?

ರೋಗಿಗಳ ಸಂಜೆಯ ಭೇಟಿಗಾಗಿ ಕುಟುಂಬಿಗರು ತಂಡತಂಡವಾಗಿ ಕ್ಯಾರಿಯರ್ ಸಹಿತ ಬರುತಿದ್ದಾರೆ. ಅವರನ್ನೆಲ್ಲಾ ನೋಡಿದರೆ ತನಗೆ ಹೊಟ್ಟೆ ಯುರಿ. ತನಗೆ ತನ್ನವರಿದ್ದೂ ತನ್ನಿಂದ ದೂರದೂರ. ತಾನು ಸಂಸಾರಕ್ಕೆ ಅನುಕೂಲಸಿಂಧುವಾಗಿದ್ದಾಗ ತನಗಿದ್ದ ಗೌರವಾದರಗಳು ಸ್ವರ್ಗೋಪಮ ಅಥವಾ ಅವರ್ಣನೀಯ.....

"ಸಾರ್.....ಸಾರ್" ಮಾಣಿಯ ಕರೆ, ಕರ್ಣಪಟಲಗಳನ್ನು ತಾಗಿತು.

ಹರಕು ಹೊದ್ದಿಕೆಯನ್ನು ಸರಿಸಿ ನೋಡಿ "ಬಿಸಿ ಇದೆಯೇನಪ್ಪಾ? ತಣ್ಣಗೆ ತರಬೇಡ. ಈ ಚಳಿಯ ಕೊರೆತದಲ್ಲಿ ತಣ್ಣಗೆ ತಿನ್ನಲಾರೆ."

"ಮಧ್ಯಾಹ್ನ ಮಾಡಿದ್ದು. ಅಂತಹ ತಣ್ಣಗಿಲ್ಲ ಬಿಡಿ."

"ಈಗ ಮತ್ತೊಮ್ಮೆ ಬಿಸಿಮಾಡಿ ತಂದಿದ್ದರೆ....?"

"ಅದೆಲ್ಲಿ ಆಗುತ್ತೆ ಸ್ವಾಮೀ? ಈ ಕೈಬಿಡುವಿರಬೇಕಲ್ಲ?"

ಆ ಮಾತಿಗೆ ಪ್ರತಿ ಹೇಳದೆ ಇಡ್ಲಿಯನ್ನು ಈಸಿಕೊಂಡ. ಮಾಣಿ ಹಾಲನ್ನು ಆಗಲೇ ಲೋಟಿಗೆ ಬಗ್ಗಿಸಿಟ್ಟಿದ್ದ. ಪರಶುರಾಂ ಉದರಸೇವೆ ಮಾಡಿ ತಟ್ಟೆಲೋಟಗಳನ್ನು ತೊಳೆದಿಟ್ಟು ಪುನಃ ಹಾಸಿಗೆ ಸೇರಿದ. ಸ್ವಲ್ಪಹೊತ್ತಿ ನೊಳಗಾಗಿಯೇ ನಿದ್ದೆ. ಕನಸಿನ ಮಾಯಾಲೋಕದಲ್ಲಿ ವಾಯುವಿಹಾರ.....

ಪಟ. ಪಟ. ಪಟ. ಪಟ ನಡೆಯುತಿದ್ದಾನೆ ಪರಶುರಾಂ. ಅದೊಂದು ನಿರ್ಜನ ಪ್ರದೇಶ. ಅಂಕುಡೊಂಕಾಗಿ ಹರಿದ ದಾರಿ. ಕರ್ರನೆಯ ಟಾರು ಬಳಿದ ಹೆದ್ದಾರಿಯಲ್ಲಿಯೇ ಪಯಣ. ಹೊಂಬಿಸಿಲ ಝಳಕ್ಕೆ ರಸ್ತೆಯಲ್ಲಿ ಕಾಲಿಡಲಾರದಷ್ಟು ಕಾವು. ರಸ್ತೆಯ ಬದಿಯಲ್ಲಿ ಆಡುತಿದ್ದ ನಾಲ್ಕಾರು ಮಕ್ಕಳ ತಂಡದಲ್ಲಿ ಮಗು-ಬಾಲಕೃಷ್ಣ! ಅವನನ್ನು ನೋಡುತ್ತಲೂ ಎರಡೂ ಕೈಗಳು ತಾವಾಗಿಯೇ ಅತ್ತ ನೀಡಿದುವು ಮನಸ್ಸು ಆದೇಶ ನೀಡು ವುದರೊಳಗಾಗಿ. ಆದರೆ, ಆ ಮಗು ಬರಬೇಕಲ್ಲ? ಆಟಗುಳಿಯಾದ ಮಗು ವಿಗೆ ತಂದೆ ಕರೆಯುತ್ತಿರುವುದಾಗಲೀ, ಕರೆದ ಮಾತಿಗೆ ತಾನು ಹೋಗ ಬೇಕೆಂಬುದಾಗಲೀ ತಿಳಿಯುತ್ತದೆಯೇ? ಅದರ ಆಟವೇ ಆಟ.

"ಬಾಪ್ಪಾ ಮಗೂ, ಸ್ವಲ್ಪಹೊತ್ತು ಇದ್ದು ಹೋಗುವೆಯಂತೆ."

"ಉಹೂ!" ಮಗು ಇತ್ತ ಬೆನ್ನು ತೋರಿತು.

ಸೂಜಿಯಂತೆ ನೇರವಾಗಿ ಹರಿದ ಆ ರಸ್ತೆಯ ತುತ್ತ ತುದಿಯಲ್ಲಿ ಹರವಾಗಿ ಹರಡಿದಂತೆ ತೋರುವ ಥಳಥಳಿಸುವಂಥ ಮೃಗಜಲ....ಅಲ್ಲ, ಗಂಗಾಜಲ. ಅಲ್ಲ, ಅಲ್ಲವೇ ಅಲ್ಲ. ಮೃಗಜಲ.

* * * *

ಮಧ್ಯಾಹ್ನದ ಸುಡು ಬಿಸಿಲಿಳಿಯುವ ಹೊತ್ತು.

ಅಕ್ಕಪಕ್ಕದವರಿಗೆಲ್ಲಾ ಕಾಫಿ ಚಹಗಳ ವಿನಿಯೋಗವಾಗುತ್ತಿದೆ. ಬಹುತೇಕ ಕುಟುಂಬಿಗರು ಬಂದು ಅವರವರ ಬಂಧುಗಳನ್ನು ಕಂಡು ಬಾಯಿ ತುಂಬಾ ಮಾತಾಡಿಸುತ್ತಿದ್ದಾರೆ. ಅನೇಕರ ಮುಖದಲ್ಲಿ ಸಂತಸದ ಕಳೆ. ಕೆಲವರದು ಜೋಲು ಮುಖ.

ಆ ಜನ ಸಮುದಾಯದಲ್ಲಿ ತಟ್ಟನೆ ಪ್ರತ್ಯಕ್ಷಳಾದ ಹಿರಿಯ ಮಗಳು. ಸರೋಜ "ಈದಿನ ಹೇಗಿದ್ದೀರಿ ಅಪ್ಪಾ!" ಎಂದರೆ ತನ್ನ ಸ್ಥಿತಿಗತಿಯನ್ನು ಹೇಳಿಕೊಳ್ಳುವುದಕ್ಕಿಂತ "ಎಷ್ಟು ದಿನಗಳ ಮೇಲೆ ಬಂದಿದ್ದೀ ಮಗಳೇ ?" ಎಂದ ಆತಂಕಪೂರ್ವಕವಾಗಿ.

"ದೂರದಿಂದ ದಿನದಿನ ಬರುವುದು ಕಷ್ಟವಲ್ಲವೇ ಅಪ್ಪಾ?"

"ಒಂದು ಮೈಲಿ ಯಾವ ಮಹಾದೂರ? ನನಗಿಲ್ಲಿ ಒಬ್ಬನೇ ಇದ್ದು ಸಾಕಾಗಿದೆ."

"ನಾಳೆ ತಂಗಿ ಬರಬಹುದು."

"ಯಾರು ವನಜಳೇ ?"

"ಹೌದು. ಅಪ್ಪಾ!"

"ಸರಿ....ಬಿಡು, ಮಗಳೇ! ದೇವರು ಸುಖಸಾವು ಕೊಟ್ಟರೆ ಸಾಕು. ನನಗಿನ್ನೇನೂ ಬೇಕಿಲ್ಲ."

ದೀರ್ಘವಾದ ನಿಟ್ಟುಸಿರು ಬಿಟ್ಟ ಪರಶುರಾಂ. ಒಂದೊಂದು ಅಕ್ಷರವೂ ಮಾನಸಿಕ ವೇದನೆಯನ್ನು ಸಾರಿ ಹೇಳುತಿತ್ತು....

"ಈಗೇಕೆ....ಆ ಮಾತು?"

ಸರೋಜ ಸ್ವಲ್ಪ ಹೊತ್ತಿದ್ದು ಹೊರಟಳು. ಪರಶುರಾಂ ಹೊರ ಬಂದು ಮೆಟ್ಟಿಲಿನ ಮೇಲೆ ಕುಳಿತುಕೊಂಡ.

ಮನಸ್ಸು ಗತಕಾಲದ ಪಾವಟಿಗೆಗಳನ್ನು ಚಕ ಚಕ ಇಳಿಯಿತು.

ಅದೊಂದು ಅವಿಸ್ಮರಣೀಯವಾದ ಸುಂದರ ದಿನ. ಶ್ರೀಕೃಷ್ಣ ಜನ್ಮಾಷ್ಟಮಿಯ ಸಂಭ್ರಮ ಎಲ್ಲೆಡೆಯೂ ದೂಪದೂಪಾಯಿತವೇ.

ಗೃಹಿಣಿ ಪಂಕಜ ಎಷ್ಟೆಷ್ಟು ದಿನಗಳಿಂದ ವಿವಿಧ ಸಾಮಗ್ರಿಗಳನ್ನು ಕಲೆ ಹಾಕಿ ಹಬ್ಬದ ವಿಶೇಷಕ್ಕೆ ಕಳೆಗೂಡಿಸಿದ್ದಳೋ.....ಅಂತೂ ಧಾರ್ಮಿಕ ಶ್ರಮ ಸಾರ್ಥಕವಾಗುವಂತೆ ಶ್ರೀಕೃಷ್ಣ ಜಯಂತಿಯನ್ನು ಸಂಭ್ರಮದಿಂದ ಆಚರಿಸಿದಾಗ ಪರಮಾನ್ನ ಉಂಡು ವಿಶ್ರಾಂತಿಯನ್ನು ಪಡೆಯುವ ಬದಲು ಆಸ್ಪತ್ರೆಗೆ ಧಾವಿಸುವ ಪ್ರಸಂಗ ಒದಗಿ ಬಂತು. ಆಗ ಎಂಟು ವರ್ಷದ ಸರೋಜ ಅಚ್ಚರಿಯಿಂದ ಪ್ರಶ್ನಿಸಿದ್ದಳು,

"ನೀವೀಗ ಆಸ್ಪತ್ರೆಗೆ ಹೊರಟಿರಾ ? ಇನ್ನೂ ಹಬ್ಬದೂಟ ಆಗಲಿಲ್ಲ?"

"ಈಗ ವನಜ-ನೀನು ಊಟ ಮಾಡಿ..... ಅಪ್ಪ ಅನಂತರ ಊಟ ಮಾಡುತ್ತಾರೆ," ಎಂದಳು ಪಂಕಜ.

ಮಕ್ಕಳಿಬ್ಬರೂ ಏನೂ ಅರ್ಥವಾಗದವರಂತೆ ಪಿಳಿಪಿಳಿ ನೋಡಿದರು. ಅವರಿಗೆ ವಿವರಿಸುವಷ್ಟು ಸಮಯ-ಸಹನೆ ಎರಡೂ ಇರಲಿಲ್ಲ ತಾಯಿಗೆ. ತನಗೆ ಬೇಕಾಗಿದ್ದ ಅಗತ್ಯ ವಸ್ತುಗಳನ್ನು ಸಂಗ್ರಹಿಸಿಕೊಂಡು ತನ್ನೊಂದಿಗೆ ಆಸ್ಪತ್ರೆಗೆ ಹೊರಡುವ ಮುನ್ನ "ಶ್ರೀಕೃಷ್ಣ ಜಯಂತಿಯಂದು ಹುಟ್ಟುವ ಈ ಮಗು ಗಂಡಾದರೆ 'ಬಾಲಕೃಷ್ಣ' ಎಂದು ಹೆಸರಿಡುವೆ," ಎಂದು ಹರಕೆ ಹೊತ್ತಳು. ಅದು ತನಗೂ ಸಮ್ಮತವೇ. ಮೊದಲಿನ ಎರಡು ಹೆಣ್ಣು ಮಕ್ಕಳಿದ್ದಾರೆ. ಮೂರನೆಯದು ಗಂಡಾಗಲಿ ಎಂಬ ಆಸೆ.

ಅಪ್ಪ-ಅಮ್ಮ ಟ್ಯಾಕ್ಸಿ ಹತ್ತುತ್ತಿದ್ದಂತೆ ಹೆಣ್ಣು ಮಕ್ಕಳು ಹನಿಗಣ್ಣಾದರು. ವಿಷಯವೇನೆಂದು ಗ್ರಹಿಸಲಾರದ ಮುಗ್ಧದುಗ್ಧ ಮಕ್ಕಳು. ತಾಯಿ ಪ್ರಸೂತ ವೇದನೆಯಿಂದ ಅವಸರವಸರವಾಗಿ ಹೊರಟುಹೋದಳು. ತಂದೆ–ತಾಯಿಯರ ಹರಕೆಯಂತೆ ಹುಟ್ಟಿದ ಮಗು ಗಂಡಾದುದರಿಂದ 'ಬಾಲಕೃಷ್ಣ' ಎಂದು ಹೆಸರಿಸಿದ್ದೂ ಆಯ್ತು. ಬಹುಶಃ ಭಗವಂತ ಕರುಣ ಭಾವದಿಂದ ಆಶೀರ್ವದಿಸಿದನೇನೋ....ನಾರೀಜನೋಚಿತವಾದ ಹೃದಯಹಾರೀ ಹಾರೈಕೆ

ಕೈಗೂಡಿದಾಗ ಉಂಟಾದ ಆನಂದಭಾವ ಅಷ್ಟಿಷ್ಟಲ್ಲ. ಪಂಕಜಳಿಗೆ ತನ್ನ ಜನ್ಮ ಪುನೀತವಾದಷ್ಟು ಸಂತಸ. ತನಗೆ ತಮ್ಮ ಬಾಳು ತುಂಬಿತು ಎಂಬಷ್ಟು ಆನಂದ.

ಅಂತೂ, ಬಾಲಕೃಷ್ಣನ ಬಾಲಲೀಲೆಗಳನ್ನು ಕಣ್ತುಂಬ ನೋಡಿದ್ದು ಆರು ವರ್ಷ ಮಾತ್ರ. ಆ ದುರದೃಷ್ಟಕರ ಮಗು ಹುಟ್ಟದಿದ್ದರೇ ಚೆನ್ನಾಗಿತ್ತು. ಭಗವಂತ ಬಲಗೈಯಲ್ಲಿ ಕೊಟ್ಟು ಎಡಗೈಯಲ್ಲಿ ಕಸಿದುಕೊಂಡ. ನಿಯಮಾನುಸಾರ ಮಗುವಿನ ಜನ್ಮ ಕುಂಡಲಿಯನ್ನು ಬರೆದಿದ್ದ ಪುರೋಹಿತ ಈ ಮಗು ಮುಂದೆ ಬೆಳೆದು ಪ್ರವರ್ಧಮಾನಕ್ಕೆ ಬಂದಾಗ ಕುಲಕೋಟಿಗೆ ಕೀರ್ತಿ ತರುವಂತಹ ಮಹದ್ವ್ಯಕ್ತಿಯಾಗುತ್ತಾನೆ ಎಂದು ಮುಕ್ತ ಕಂಠದಿಂದ ನುಡಿದು ಆನಂದವನ್ನೂ ಆನಂದಿತಗೊಳಿಸುವಂತೆ ಆಶೀರ್ವದಿಸಿದ್ದರು.

ಆದರೆ.....ಆದುದೇನು ? ನಿರಾಸೆ-ದುಃಖಗಳ ಜಂಕಣೆ. ಹಾ !

ಮಗು ಕಳೆದು ಹೋಗುತ್ತೆ ಎಂಬುದನ್ನು ಅವರೇಕೆ ಗ್ರಹಿಸಲಿಲ್ಲ ? ಅವರು ಮುನ್ಸೂಚನೆ ಕೊಟ್ಟದ್ದಿದ್ದರೆ ಮುನ್ನೆಚ್ಚರಿಕೆ ವಹಿಸಬಹುದಾಗಿತ್ತು.....ಆದರೆ ! ವಿಧಿ ಬಲೂ ಕ್ರೂರಿ.

* * * *

ಪಲ್ಲವರಾಜಿಯಲ್ಲಿ ಅರಳಿದ್ದ ಸುಮಸಮುಚ್ಚಯದಲ್ಲಿ ಸುಮಸಂಬಾರವನ್ನು ಅತ್ಯಂತ ಉತ್ಸಾಹದಿಂದ ಅರಸುವ ಭ್ರಮಂತ ಭ್ರಮರಾವಳಿಗಳ ಝೇಂಕಾರ ಅಂತಸ್ಥಲವನ್ನು ಮುಟ್ಟುತ್ತದೆ.

ಗಿಡದಿಂದ ಗಿಡಕ್ಕೆ, ರಂಬೆಯಿಂದ ರೆಂಬೆಗೆ ಜಿಗಿದಾಡುತ್ತ ಕೊರಲುಲಿಯನ್ನು ಹರಿಯ ಬಿಡುವ ಪಕ್ಷಿಕೋಟಿಯನ್ನು ನೋಡುತ್ತ ಕಿಟಕಿಯಾಚೆ ದೃಷ್ಟಿಯನ್ನು ನೆಟ್ಟ ಪರಶುರಾಂ ಪಲ್ಲಂಕದ ಮೇಲೆ ಅಡ್ಡಾಗಿದ್ದಾನೆ. ಸಾಲು ಮಂಚಗಳ ರೋಗ ವಾಸನೆಯೆಲ್ಲಾ ಮೂಗಿಗೆ ಮುತ್ತುತ್ತದೆ. ಪುಸ್ತಕ ಪಠಣವು ದೃಷ್ಟಿಮಾಂದ್ಯದಿಂದ ದೂರ. ಈಗ ಕಾಲಹರಣವೆಂದರೆ ಗತಕಾಲದ ವಿಷಯ ಮಂಥನದಿಂದಲೇ. ಅತ್ತಿತ್ತ ಹೆಚ್ಚು ಹೊತ್ತು ಅಡ್ಡಾಡುವ ಶಕ್ತಿಯೂ ಇಲ್ಲ. ಅಕ್ಕಪಕ್ಕದವರಲ್ಲಿ ವಿಚಾರ ವಿಹಾರಕ್ಕೂ ಮನವೊಪ್ಪುವಂಥ ಸ್ನೇಹ ಬಂಧವೂ ಕುದುರಲಿಲ್ಲ. ಅಂದಮೇಲೆ, ಒಂದೊಂದು ದಿನ ಕಳೆಯುವುದೂ ಸಹ ಕತ್ತಿಯಲುಗಿನ ಮೇಲೆ ನಡೆದಾಡಿದಷ್ಟು ಕಠಿಣ.

ಪಂಕಜ ಕೊನೆಯುವರೆವಿಗೂ ಬಾಲಕೃಷ್ಣ ಎಲ್ಲಿಯೋ ಬದುಕಿದ್ದಾನೆ; ಜಾತಕ ಪ್ರಕಾರ ಉಚ್ಚಾ ್ರಯ ಸ್ಥಿತಿಗೇರಲೇಬೇಕು ಎನ್ನುತಿದ್ದಳು. ಸಾಯುವ ಮುನ್ನ ಒಮ್ಮೆ ಕಣ್ತುಂಬ ನೋಡುವ ಮನಸ್ಸು ತುಂಬಾ ಇತ್ತು. ಪಾಪ, ನತದೃಷ್ಟ ಸ್ತ್ರೀ ಪಂಕಜ. ಅವಳ ಆಸೆ ಈಡೇರಲಿಲ್ಲ. ಹಾಗೇ ಕಣ್ಮುಚ್ಚಿದಳು. ಇನ್ನು ನನ್ನ ಗತಿಯೂ ಅಷ್ಟೆ.....

ಆ ಯೋಚನೆ ಬಂದಾಗಲೇ ವೈದ್ಯರುಗಳ ತಂಡ ಆಗಮಿಸಿತು. ಹಾಸಿಗೆ ಯಿಂದ ಹಾಸಿಗೆಗೆ ಚಲಿಸಿ ರೋಗಿಗಳ ದೇಹಸ್ಥಿತಿ ಪರೀಕ್ಷಿಸಿ ಔಷಧಿ ಪಥ್ಯ-ಪಾನಗಳ ವಿವರಣೆ ನೀಡುತಿದ್ದಂತೆ ಹೊಸ ತರುಣ ವೈದ್ಯನೊಬ್ಬ ದೃಷ್ಟಿಗೆ ಬಿದ್ದ. ಅವರ ತಂಡ ತನ್ನ ಹಾಸಿಗೆಯ ಬಳಿಗೆ ಬಂದಾಗ ಪರಶುರಾಂ ಅವನನ್ನು ಕಣ್ಣಿನಮೇಲೆ ಕಣ್ಣಿಟ್ಟು ಗಮನಿಸಿದ. ಎಡ ಮುಂಗೈ ಮೇಲೆ ಸುಟ್ಟಗಾಯದ ಗುರುತು !

ಅರೆ! ಎಂತಹ ಸೋಜಿಗ....? ಇವನಾರು ? ಎಂದು ಅಚ್ಚರಿಯಿಂದ ನೋಡುನೋಡುತಿದ್ದಂತೆಯೇ ಆ ವೈದ್ಯರ ತಂಡ ಮುಂದಿನ ವಾರ್ಡಿಗೆ ಹೊರಟಿತು.

ಪರಶುರಾಂ ವಾರ್ಡ್‌ಬಾಯ್ ಕರೆದು ಕೇಳಿದ "ಈ ದಿನ ಒಬ್ಬ ಹೊಸ ವೈದ್ಯರನ್ನು ಕಂಡೆ. ಯಾರದು ?"

"ಅವರು ಹುಬ್ಬಳ್ಳಿಯಿಂದ ವರ್ಗವಾಗಿ ಬಂದಿದ್ದಾರೆ."

"ಅವರಿಂದಲಾದರೂ ನನ್ನ ದೈಹಿಕಭಾದೆ ಗುಣವಾದರೆ ಸಾಕು."

ವಾರ್ಡ್‌ಬಾಯ್ ನಸುನಗುತ್ತ ಅಂದ "ಆಗಬಹುದು ಯೋಚಿಸ ಬೇಡಿ."

ಮರುದಿನ ವೈದ್ಯರ ತಂಡ ಪರೀಕ್ಷಿಸಲು ಬಂದಾಗಲೂ ಪರಶುರಾಮನ ಕಣ್ಣು ಹೊಸ ವೈದ್ಯನ ಎಡ ಮುಂಗೈ ಮೇಲೆ. ಅವನ ಮುಖಚರ್ಯೆ, ಕಂಠಸ್ವನ. ಪ್ರತ್ಯಕ್ಷ ರೂಪು ಪ್ರತಿಯೊಂದೂ ಆಕರ್ಷಣೀಯವೇ. ಏನೋ ಒಂದು ರೀತಿಯ ಪ್ರೇಮ ಬಂಧುರ, ಮತ್ತೇನೋ ಒಂದು ರೀತಿಯ ಜೀವ ಕಾತರ ಒಡಲಾಳದಲ್ಲಿ ಕೈಯಾಡಿಸುತ್ತಿವೆ. ಏನೆಂಬುದೇ ಅರ್ಥವಾಗುತ್ತಿಲ್ಲ.

"ಏನಪ್ಪಾ, ಹೇಗಿದ್ದೀರಿ ?"

ವೈದ್ಯರ ತಂಡದಲ್ಲಿದ್ದ ಹೊಸಮುಖದಿಂದ ಹೊರಬಿದ್ದ ಪ್ರಶ್ನೆ.

"ಏನೂ ಉತ್ತಮವಿಲ್ಲ ;" ನರಳು ದನಿ ಉತ್ತರ ನೀಡಿತು.

ತರುಣವೈದ್ಯ ದೈಹಿಕ ಪರೀಕ್ಷೆ ನಡೆಸಿದ ನಂತರ "ಇಂದು ಔಷಧಿ ಬದಲಿಸೋಣ..........ಇದರಿಂದ ನಿಮಗೆ ಅನುಕೂಲವಾಗಬಹುದು," ಎಂದ.

"ಅಷ್ಟು ಉಪಕಾರಮಾಡಿ. ನರಳೀನರಳಿ ಸಾಕಾಗಿದೆ. ಸಾಯಬೇಕು ಅಥವಾ ಚೆನ್ನಾಗಿರಬೇಕು, ಎರಡೂ ಇಲ್ಲದ ಪಾಡು ಯಾರಿಗೆ ಬೇಕು....?"

"ಚಿಂತೆ ಮಾಡಬೇಡಿ....ಒಳ್ಳೆಯದಾಗುತ್ತೆ."

ವೈದ್ಯರುಗಳು ನಿರ್ಗಮಿಸುತ್ತಲೂ ಪರಶುರಾಂ ಅದೇ ವಾರ್ಡ್ ಬಾಯ್ ಕರೆದು "ಹೊಸ ವೈದ್ಯರ ಬಲಗಿವಿಯ ಹಿಂದೆ ಅಡಿಕೆ ಭಾಗದ ಗಾತ್ರ ಉಬ್ಬಿದ ಕೃಷ್ಣ ಮಚ್ಚೆಯಿದೆಯೇ ನೋಡಿಕೊಂಡು ಬಾ," ಎಂದ.

"ಏಕೆ ಹೇಳಿ ?"

"ಸುಮ್ಮನೆ.....ನೋಡಿಕೊಂಡು ಬಾ."

ಅವನು ಪಕ್ಕದ ವಾರ್ಡಿಗೆ ಹೋಗಿ ಸ್ವಲ್ಪಹೊತ್ತಿನ ಬಳಿಕ ಬಂದು ಹೇಳಿದ "ಇಲ್ಲ."

* * * *

ಪರಶುರಾಂ ಆಸ್ಪತ್ರೆಗೆ ಸೇರಿದಮೇಲೆ ಅದೇ ವಾರ್ಡಿನಲ್ಲಿ ಮೂರು ಮಂದಿ ಅಸುನೀಗಿದ್ದಾರೆ. ಆಮರಣಾಂತಕ ಯಾತನೆ ಜೀವದ ಕಣಕಣವನ್ನೂ ಹಿಂಡಿವೆ. ನರಳುವವರ ನರಳುದನಿ ಹೃದಯ ಕುಂಡಲಿಯನ್ನು ಕೋರೈಸುತ್ತಲೂ ಇದೆ. ಎಷ್ಟೋ ವೇಳೆ ತನಗರಿಯದಂತೆಯೇ 'ಅಯ್ಯೋ, ಪಾಪ' ಎಂಬ ಕರುಣಕಾತರ ಸ್ವರ ಹೊರ ಹೊಮ್ಮುತ್ತದೆ. ಉರುಳುವ ಒದೊಂದು ಕ್ಷಣವೂ ಜುಗುಪ್ಸೆಯ ಕುಂಡದಲ್ಲಿ ಮುಳುಗೇಳುತ್ತದೆ.

ಎರಡೂ ಕೈಗಳಿಂದ ಮೊಣಕಾಲುಗಳನ್ನು ಕಟ್ಟಿಕೊಂಡು ಜಗಲಿಯ ಕಡೆ ದೃಷ್ಟಿ ಹಾಯಿಸಿದ್ದ.

ವನಜ ಬಾಗಿಲಲ್ಲಿ ಕಾಣಿಸಿಕೊಂಡಳು. ಕೈಯಲ್ಲಿ ಒಂದು ಸಣ್ಣ ಬುಟ್ಟಿಯೂ ಇದೆ. ಏನಾದರೂ ತಿಂಡಿ ತಿನಿಸು ತಂದಿದ್ದಾಳೇನೋ ; ಈ ನಾಲಿಗೆಗೆ ಮಾತ್ರ ಏನೂ ಬೇಡ. ಒಂದು ಬಿಸಿಯುಸಿರು ಬಿಟ್ಟು ಅವಳತ್ತ ದೃಷ್ಟಿ ಹಾಯಿಸಿದ. ಬುಟ್ಟಿಯಲ್ಲಿದ್ದುದು ಗೃಹ ಬಳಕೆ ಸಾಮಗ್ರಿ.

"ಹೇಗಿದ್ದೀರಿ ಅಪ್ಪಾ ?"

"ಇನ್ನು ಹೇಗಿದ್ದರೇನು ? ನಾನು ಬಯಸುವುದು ಸುಖಮರಣ ಮಾತ್ರ."

"ಅಯ್ಯೋ, ಅದಕ್ಕೇನು ಈಗಲೇ ಅವಸರ ?"

"ಇನ್ನು ಬದುಕಿ ಆಗುವುದೇನು ಹೇಳು ?"

"ಇಷ್ಟು ಬೇಸರಪಟ್ಟುಕೊಂಡರೆ ಹೇಗೆ ? ಆಯಸ್ಸು ಕೊಟ್ಟವನು ಪರಮಾತ್ಮ. ಅವನು ಇಟ್ಟಷ್ಟು ಕಾಲ ಸುಖವಾಗಿರುವುದಕ್ಕೆ ಪ್ರಯತ್ನಿಸ ಬೇಕು. ಆಸ್ಪತ್ರೆಯಲ್ಲಿದ್ದೀರಿ. ಚಿಕಿತ್ಸೆ ದೊರೆಯುತ್ತದೆ. ಇನ್ನೇನು ಬೇಕು?"

ಒಂದೆರಡು ಕ್ಷಣಗಳು ಅವಳ ಕಡೆ ಅಸಡ್ಡೆಯಿಂದ ನಿಟ್ಟಿಸಿದ ನೋಟ ಬೇರೆಡೆಗೆ ಸಿಡಿಯಿತು.

ಅಪ್ರಬುದ್ಧ ಬುದ್ಧಿ ಅದನ್ನು ಅರ್ಥಮಾಡಿಕೊಳ್ಳಲಾರದೆ ಸಮಂಜಸ ವಾಗಿ ಭಾವಿಸಿತೇನೋ.....ಪ್ರಾಸಂಗಿಕವಾಗಿ ನುಡಿದಳು ವನಜ "ಆ ಯೋಚನೆ ಬಿಡಿ ; ಏನೇನು ಆಗಬೇಕೋ ಅದು ಆಗಿಯೇ ತೀರಬೇಕು."

ವೃದ್ಧ ಭಾರವಾದ ಉಸಿರನ್ನು ಹೊರಹಾಕಿದ.

* * * *

ತರುಣಾರುಣ ಬಾನ್ ಬಯಲನ್ನು ಲೀಲಾ ಖೇಲನದಿಂದ ಏರುತಿದ್ದ.

ವಾಯುಮಂಡಲದಲ್ಲಿ ಶೀತಲ ಶೈತ್ಯ ಸಂಚರಿಸುತಿತ್ತು.

ಪರಶುರಾಂ ಮೈಮುದುಡಿ ಹಾಸಿಗೆಯ ಮೇಲೆ ಮಂಡಿಸಿದ್ದ. ಚಳಿಗಾಲ ಮುಗಿಯುತ್ತ ಬಂದಿತ್ತು. ಆದರೂ, ಇಂದು ಇದ್ದಕ್ಕಿದಂತೆಯೇ ಶೀತದೇಶದ ಶೈತ್ಯದಂತೆ ಅತೀವ ಶೀತಲತೆ ವಾತಾವರಣದಲ್ಲಿ. ಕ್ಷೀಣಿತ ದೇಹದ ಮೂಳೆ ಮೂಳೆಗಳೂ ಲಟಪಟನೆ ಮುರಿಯುತ್ತವೆಯೋ ಎಂಬಷ್ಟು ಹಿಂಸ್ರಕ.... ಮಕ್ಕಳು ಮೂವರೂ ಸ್ಥಿತಿವಂತರು. ದಿನವೂ ಉಣ್ಣೆ ಬಟ್ಟೆಗಳನ್ನು ಧರಿಸು ತ್ತಾರೆ. ಅದೇ ಈ ಬಡತಂದೆಯ ಬಗ್ಗೆ ಆ ಯೋಚನೆ ಬರುವುದಿಲ್ಲವಲ್ಲಾ, ಅದೇ ಆಶ್ಚರ್ಯ. ಆ ಯೋಚನೆ ಬಂದಾಗ ಜುಗುಪ್ಸೆ-ತಿರಸ್ಕಾರಗಳು ಮೈಮನಗಳಲ್ಲಿ ಹರಿದಾಡಿದುವು. ಆ ಹರಕಲು ಶಾಲನ್ನೇ ತಲೆಯ ತುಂಬ ಸುತ್ತಿಕೊಂಡ. ಆದರೂ ಗಡಗಡ ನಡುಗಿಸುತ್ತದೆ ಚಳಿ.

ವೈದ್ಯರ ತಂಡ ಒಳಹೆಜ್ಜೆಯಿಟ್ಟಾಗ ಪರಶುರಾಂ ಸಪ್ಪೆ ಮೋರೆಯಿಂದ ಮಲಗಿದ್ದ. ಕಣ್ಣುಗಳಲ್ಲಿ ದೈನ್ಯಭಾವ ತುಂಬಿ ತುಳುಕುತಿತ್ತು. ಅಸ್ತವ್ಯಸ್ತವಾದ ಬಾಚದ ಕೂದಲು, ಹೆರೆಯದ ಗಡ್ಡ, ಗುಳಿಬಿದ್ದ ಕೆನ್ನೆಗಳು ತನ್ನ ಮಹಾಯಾತ್ರೆಯ ಸಿದ್ಧತೆಯನ್ನು ಸಾರಿ ಹೇಳುತ್ತಿವೆ.

"ಹೇಗಿದ್ದೀರಿ ? ರಾತ್ರಿ ನಿದ್ದೆ ಬಂತೆ ?" ಎಂದ ಹೊಸ ವೈದ್ಯ.

"ಹೆಚ್ಚಿನ ಬದಲಾವಣೆಯೇನೂ ಕಾಣಿಸುತ್ತಿಲ್ಲ. ನಿದ್ರೆಯೂ ಚೆನ್ನಾಗಿ ಬರುವುದಿಲ್ಲ. ಕಣ್ಣು ಮಂಜು ಮಂಜು. ನನಗೆ ಹೊತ್ತು ಕಳೆಯುವುದೇ ತುಂಬ ಕಷ್ಟ." ನರಳುದನಿ ನುಡಿಯಲಾರದೇ ನುಡಿಯಿತು.

"ಇಲ್ಲಿ ಬೇಕಾದಷ್ಟು ಮಂದಿ ಇದ್ದಾರೆ ಮಾತಾಡುತ್ತ ಹೊತ್ತು ಕಳೆಯಬಹುದಲ್ಲ; ಅಷ್ಟೇಕೆ ಬೇಸರ." ಎನ್ನುತ್ತ ರಕ್ತ ಒತ್ತಡ ಪರೀಕ್ಷಾ ಯಂತ್ರವನ್ನು ತೋಳಿಗೆ ಅಳವಡಿಸಿದ.

ಪರಶುರಾಮನ ದೃಷ್ಟಿ ಅವನ ಕೈಯೆಡೆಗೆ ಹರಿದಾಗ ಸುಟ್ಟಗಾಯದ ಕಲೆ ಪುನಃ ದೃಷ್ಟಿಗೆ ಬಿತ್ತು. ಮನಸು ಮಿಡುಕಿ ಯಾವ ಕೈಯೆಂದು ನೋಡಿದರೆ ಎಡ ಮುಂಗೈ ! ಆ ಕ್ಷಣ ಮನಃಪ್ರಾಣಗಳು ಕಲಕಲಮಯ. ಆದರೆ, ಅವನೆಲ್ಲಿ ? ನಾನೆಲ್ಲಿ ? ಕೇಳಲು ನಾಲಿಗೆ ಆಡೀತೇ ? ದೃಷ್ಟಿ ಅವನನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ನಿಟ್ಟಿಸಿತು. ಅದೇ ದುಂಡು ಮುಖ. ದುಂಡುಗಲ್ಲದ ಮೇಲೆ ಗುಳಿ !

ನೆತ್ತರಿನ ಝರಿ ಚಿತ್ರವಿಚಿತ್ರವಾಗಿ ಹುಚ್ಚೆದ್ದು ಹರಿದಾಡಿತು ಮೈಯಲ್ಲಿ. ರಕ್ತಹೀನವಾಗಿದ್ದ ಮುಖಬಿಂಬ ರಕ್ತರಂಜಿತವಾಯಿತು ಭಾವೋದ್ವೇಗದಿಂದ. ವೈದ್ಯ ಅವನ ಮುಖದ ಮೇಲಿನ ಕ್ಷಿಪ್ರ ಬದಲಾವಣೆಯನ್ನು ಕಂಡರೂ ಕಾಣದಂತೆ ಚಾರ್ಟಿನ ಕಡೆ ದೃಷ್ಟಿ ಹೊರಳಿಸಿದ. ಪರಶುರಾಂ ಪ್ರಯತ್ನಿಸಿದರೂ ತನ್ನ ದೃಷ್ಟಿಯನ್ನು ಅವನಿಂದ ಕೀಳಲಾಗಲಿಲ್ಲ. ಆ ಕಣ್ಣು, ಮೂಗು, ಬಾಯಿ, ಗಲ್ಲ ಕಿವಿ ಒಂದೊಂದೂ ತನ್ನ ಬಾಲಕೃಷ್ಣನೇ ಪ್ರತ್ಯಕ್ಷವಾದಂತೆ ಹೋಲುತ್ತಿವೆ ! ದೇವರ ದಯದಿಂದ ಖಂಡಿತ ಅವನೇ ಆಗಿದ್ದರೆ ಆನಂದದಿಂದ ಸಾಯಬಹುದಿತ್ತು.....ಎಂದೆಲ್ಲ ಚಿಂತಿಸಿತು ಸಂಭ್ರಾಂತ ಚಿತ್ತ. ಅವನು ತುಂಬು ತೋಳಿನ ಶರಟು ತೊಟ್ಟದುದರಿಂದ ಬಲಗೈ ಮುಚ್ಚಿ ಕಾಣಿಸದಲ್ಲಾ ಎಂದು ಚಡಪಡಿಸಿತು ಬುದ್ಧಿ. ಕುತೂಹಲ-ಆಸೆ-

ಆಕಾಂಕ್ಷೆ-ಉದ್ವೇಗಗಳು ಒಂದೇ ಬಾರಿಗೆ ಅಂತರಂಗದಲ್ಲಿ ಧಾಳಿ ಎಬ್ಬಿಸಿದುವು. ಅಶಕ್ತ ಹೃದಯ, ಅಶಕ್ತ ಶರೀರ ಬಳಲಿ ಬೆಂಡಾದುವು.

"ಇದೇ ಔಷಧಿಯನ್ನು ಇನ್ನೆರಡು ದಿನ ತೆಗೆದುಕೊಳ್ಳಿ. ಅನಂತರ ನೋಡೋಣ. ಕೆಲವು ದಿನಗಳಾದರೂ ಅದಕ್ಕೆ ಅವಕಾಶ ಕೊಡಬೇಕಷ್ಟೆ?"

"ಆಗಲಿ.....ತೆಗೆದುಕೊಳ್ಳುವೆ."

ವಿಚಿತ್ರಗತಿಯಲ್ಲಿ ನೋಡುತ್ತ ಉತ್ತರಿಸಿದ ಪರಶುರಾಂ.

ವೈದ್ಯರ ತಂಡ ಪಲ್ಲಂಕದಿಂದ ಪಲ್ಲಂಕಕ್ಕೆ ಚಲಿಸುತ್ತ ಹಾಗಿಂದ್ಹಾಗೇ ನೇರಬಾಗಿಲಿಂದ ಹೊರಬಿತ್ತು ಅನಂತರ ಮಾತ್ರೆಯನ್ನು ನೀಡಲು ಬಂದ ನರ್ಸಳನ್ನು ಕುರಿತು ಕೇಳಿದ ಪರಶು,

"ಸಿಸ್ಟರ್ ! ಈ ಹೊಸ ಡಾಕ್ಟರ ಹೆಸರೇನು ?"

"ಬಾಲಕೃಷ್ಣ."

"ಬಾಲಕೃಷ್ಣ....?"

"ಏಕೆ, ಆಶ್ಚರ್ಯವೇ ?" ನಗುಮುಖದಿಂದ ಕೇಳಿದಳು ನಾಗವೇಣಿ.

ಆ ಪ್ರಶ್ನೆ ಎದ್ದೊಡನೆಯ ನೆತ್ತಿಗೇರಿದ್ದ ಪಿತ್ತವೆಲ್ಲಾ ಜರ್ರನೆ ಇಳಿದಂತಾಯಿತು. ಆದರೂ, ತನ್ನನ್ನು ಸಾವರಿಸಿಕೊಳ್ಳುತ್ತ ಹೇಳಿದ. ಆಶ್ಚರ್ಯವೇನೂ ಇಲ್ಲ....ಸುಮ್ಮನೆ ಕೇಳಿದೆ ಅಷ್ಟೆ."

"ಅಷ್ಟೇನಾ?"

"ಅವರು ಯಾವ ಕಡೆಯವರು ?"

"ಬಹುಶಃ ತಮಿಳರಿರಬಹುದು."

"ಹೌದಾ.....?"

"ನಾನು ತಿಳಿದುಕೊಂಡಿರುವುದು ಹಾಗೆ. ಅವರ ಕನ್ನಡವೆಲ್ಲಾ ತಮಿಳಿನ ಸಾಂಗತ್ಯದಿಂದ ಕೂಡಿರುತ್ತದೆ!"

ಪರಶುರಾಂ 'ಹೌದು' ಎಂಬಂತೆ ತಲೆದೂಗಿದ.

"ಬಾಲಕೃಷ್ಣ ತುಂಬ ಕೀರ್ತಿಪಡೆದ ಡಾಕ್ಟರು. ಇನ್ನು ನಿಮ್ಮ ಕಾಹಿಲೆ ಹರಿಯುವುದರಲ್ಲಿ ಸಂಶಯವಿಲ್ಲ, ಬಿಡಿ."

"ಅಷ್ಟಾದರೆ ಸಾಕಾಗಿದೆ. ಈ ಔಷಧಿ-ಲೋರ್ಷನ್‌ಗಳ ಕಟುವಾಸನೆಯಿಂದ ನನ್ನ ಕರುಳು ಸುಲಿಯುತ್ತದೆ....."

"ಏನು ಮಾಡುವುದಕ್ಕಾಗುತ್ತೆ. ಎಲ್ಲಾ ಸಹಿಸಿಕೊಳ್ಳಬೇಕು."

"ಡಾ|| ಬಾಲಕೃಷ್ಣ ಯಾವ ಕಡೆಯವರು ನಿಮಗೆ ಗೊತ್ತೆ?"

"ಅದು ತಿಳಿಯದು."

ಪರಶುರಾಂ ಅಷ್ಟಕ್ಕೆ ಸುಮ್ಮನಾದರೂ ನನ್ನ ಮಗ ಒಂದುವೇಳೆ ಇದ್ದಿದ್ದರೆ ಹೀಗೇ ಇರುತಿದ್ದ ಎಂದುಕೊಂಡ. ಅವನು ಇದ್ದಿದ್ದರೆ ನನ್ನನ್ನು ಚೆನ್ನಾಗಿ ನೋಡಿಕೊಳ್ಳುತಿದ್ದನೋ ಏನೋ....ದುರ್ವಿಧಿ ಎಲ್ಲಾ ರೀತಿಯಿಂದಲೂ ದಾಪುಗಾಲು ಹಾಕಿತು. ಪುರೋಹಿತ ಹೇಳಿದ್ದ ಮಗು ತುಂಬಾ ಉನ್ನತ ಮಟ್ಟಕ್ಕೇರುತ್ತೆ ಎಂದು. ಈ ಡಾಕ್ಟರನ್ನು ನೋಡಿದರೆ ಇರಬಹುದೇನೋ ಎಂಬಷ್ಟು ನಂಬುಗೆ. ಇವನು ಅರ್ಧ ತೋಳಿನ ಶರಟು ತೊಟ್ಟು ಬಂದರೆ ಖಚಿತಪಡಿಸಿಕೊಳ್ಳಬಹುದು.....ಹೋಗಲಿ, ನನಗಂತೂ ಅದೃಷ್ಟವಿಲ್ಲ. ಮಗು ಎಲ್ಲಾದರೂ ಸುಖವಾಗಿರಲಿ. ಭಗವಂತ ಅಷ್ಟು ಉದಾರಿಯಾದರೆ ಸಾಕು.

* * * *

ಹೆದ್ದಾರಿಯಲ್ಲಿ ಅತೀವ ಸದ್ದುಗದ್ದಲ. ಎಷ್ಟೋ ಬಾರಿ ಕಿವಿಗೆ ಅರಳೆ ಇಟ್ಟುಕೊಳ್ಳಲೇ ಎಂಬಷ್ಟು ಮುಜುಗರ. ಅಂದಿಂದಿಗೂ ಸಹಿಸಿಕೊಂಡಂತೆ ಮುಂದೆಯೂ ಸಹಿಸಿಕೊಳ್ಳದ ಹೊರತು ಗತ್ಯಂತರವಿಲ್ಲ. ನರನರಗಳೂ ದುಃಖಿಸುತ್ತವೆ ; ರಕ್ತದ ಕಣಕಣಗಳೂ ದುರದೃಷ್ಟವನ್ನು ಹಳಿಯುತ್ತವೆ.

ಮೈಯಲ್ಲಿ ಖಂಡ ಖಂಡಗಳೂ ಸಿಡಿಯುವಂತಹ ನೋವು. ಸುಸ್ತು ಸಂಕಟಗಳ ಗೋಳು. ನರಳುದನಿ ಒಳಗಿಂದೊಳಗೇ ಅದೆಷ್ಟು ಹೊತ್ತು ನರಳಿತೋ.....ಅಯ್ಯೊ, ದೈವಕ್ಕೆ ಕಣ್ಣಿಲ್ಲ. ರೋಗವೂ ಹರಿಯದು; ಸಾವೂ ಬಾರದು.

ಇಂದು, ಅಪರೂಪಕ್ಕೆ ಮಗ-ರಾಮಚಂದ್ರ ಮಡದಿಯೊಡನೆ ಆಗಮಿಸಿದ. ಅವರನ್ನು ನೋಡಿದ ಮೇಲೆ ಇಂದು ಭಾನುವಾರ ಎಂಬುದರ ಅರಿವಾಯಿತು. ಹುಬ್ಬೆತ್ತಿ ನೋಡಿದ ಪರಶುರಾಂ.

"ಹೇಗಿದ್ದೀಯಪ್ಪಾ ?"

"ನೀನೇ ನೋಡು."

"ಹೋದಸಲಿಗಿಂತ ಈ ಸಲಿ ವಾಸಿ ಎನಿಸುತ್ತೆ."

"ಇಲ್ಲಪ್ಪಾ, ನರಳುವುದು ತಪ್ಪಲಿಲ್ಲ. ಇದೇ ಔಷದ ಸ್ವಲ್ಪ ದಿವಸ ತೆಗೆದುಕೊ ಎಂದಿದ್ದಾರೆ ಡಾಕ್ಟರು."

"ಅದು ಒಳ್ಳೆಯದು, ನೀವು ಖಂಡಿತ ಈ ಸಲಿ ಉತ್ತಮವಾಗಿ ಕಾಣಿಸುತಿದ್ದೀರಿ. ಆಸ್ಪತ್ರೆ ಸೇರಿದುದು ತುಂಬಾ ಒಳ್ಳೆಯದಾಯ್ತು."

ಆ ಮಾತಿಗೆ ದನಿಗೂಡಿಸುತ್ತ ಸೊಸೆ ಹೇಳಿದಳು "ನೀವು ತುಂಬಾ ಬೇಸತ್ತುಕೊಳ್ಳುತ್ತೀರೋ ಏನೋ. ಅದಕ್ಕೇ ಬೇಗನೆ ಗುಣವಾಗುತ್ತಿಲ್ಲ."

"ಚಿಂತೆ ಹಚ್ಚಿಕೊಳ್ಳುವಂತಾದ್ದು ಏನಿದೆ ತಾಯಿ? ನನಗಿನ್ನು ಬದುಕಿ ಏನಾಗಬೇಕಾಗಿದೆ....? ಇರುವಷ್ಟು ಕಾಲ ನರಳದೆ ತಣ್ಣಗೆ ಕಣ್ಣು ಮುಚ್ಚಿದರೆ ಸಾಕು."

ರಾಮಚಂದ್ರ ಹಾಸ್ಯ ಪ್ರಧಾನವಾಗಿ ಅಂದ,

"ನೀನು ಯಾವಾಗಲೂ ಹೇಳಿದ್ದನ್ನೇ ಹೇಳುವುದಷ್ಟೆ? ಏನಾದರೂ ಹೊಸದಾಗಿ ಹೇಳು ಕೇಳೋಣ."

ಆ ಪ್ರಶ್ನೆಯಿಂದ ಶುಷ್ಕವಾದ ತುಟಿಗಳಲ್ಲಿ ಸಣ್ಣ ಕಿರುನಗೆ ಮೂಡಿ ಮಾಯವಾಯಿತು. ತನ್ನನ್ನು ತಾನು ಸುಧಾರಿಸಿಕೊಳ್ಳುತ್ತ ನುಡಿದ ಪರಶುರಾಂ,

"ನೀನು ಮನಸ್ಸಿಗೆ ತೆಗೆದುಕೊಳ್ಳುವುದಾದರೆ ನಾನೊಂದು ಮಾತು ಹೇಳುವೆ."

"ಏನು ಹೇಳು....."

"ನೀನು ಖಂಡಿತ ತಮಾಷೆ ಎನ್ನಬೇಡ. ಇದು ಅಂತರಾತ್ಮನಿಗೆ ತಟ್ಟಿದ ವಿಷಯ!"

"ಖಂಡಿತ ಹೇಳು."

"ನನಗೆ ಸುಮ್ಮನೆ ಬಾಯಿ ಬಿಟ್ಟು ನಗೆಪಾಟಲಾಗಲೂ ಇಷ್ಟವಿಲ್ಲ..... ನೀನೇನಂತೀಯೋ....."

"ಹೇಳುವುದಾದರೆ ಸಂಕೋಚವೇಕೆ?

ಈ ಮಗ ಎಂದೂ, ಯಾವತ್ತೂ ನನ್ನ ಬೇಡಿಕೆ-ಕೇಳಿಕೆಗಳನ್ನು ಮಾನಿಸಿಯೇ ಇಲ್ಲ. ತಂಡೆ ಎಂಬ ಗೌರವ-ಪ್ರೀತ್ಯಾದರಗಳು ಇಲ್ಲವೇ ಇಲ್ಲ. ಎಲ್ಲಾ ಮೇಲು ಮೋಲಕ್ಕೆ!....ಕಿವಿಯ ಸನಿಹದಲ್ಲಿಯೇ ಯಾರೋ ಕೂಗಿ ಹೇಳಿದಂತಾಯಿತು. ಒಂದೆರಡುಗಳಿಗೆ ತನ್ನಲ್ಲೇ ಯೋಚಿಸಿದ ಪರಶುರಾಂ.

ಹೇಳುವುದರಿಂದ ಪ್ರಯೋಜನವಿಲ್ಲ.....ಪುನಃ ಕೂಗಿ ಹೇಳಿತು ಅಂತರ್ವಾಣಿ.

ಆದರೂ, ಕರುಳಬಳ್ಳಿಯ ತಡೆಯಲಾರದ ಆಸೆ ಬಾಯ್ದೆರೆಸಿತು, "ರಾಮು, ಇಲ್ಲಿ ಕೇಳು. ಈಗ ಹೊಸ ಡಾಕ್ಟರು ಬರುತಿದ್ದಾರೆ. ಅವರ ಹೆಸರು ಬಾಲಕೃಷ್ಣ. ನಮ್ಮ ಬಾಲಕೃಷ್ಣನಿಗೆ ಎಡಗೈಯಲ್ಲಾಗಿದ್ದ ಸುಟ್ಟ ಗಾಯದ ಕಲೆಯಂತೆಯೇ ಅವರ ಕೈಯಲ್ಲೂ ಇದೆ. ಅವರ ಮುಖಚರ್ಯೆ ಸಹ ಬಾಲಕೃಷ್ಣನಿಗೆ ಸಾಕಷ್ಟು ಹೋಲುತ್ತದೆ. ಈಗೀಗ ನನಗಂತೂ ನಮ್ಮ ಬಾಲಕೃಷ್ಣನೇ ಇರಬಹುದು ಎನಿಸುತ್ತಿದೆ. ಅವನ ಜಾತಕ ಅವನು ತುಂಬ ಉಚ್ಛ್ರಾಯ ಸ್ಥಿತಿಗೆ ಬರುತ್ತಾನೆ ಎಂದಿದೆ. ನೀನು ಅವರನ್ನು ಯಾರು, ಎಲ್ಲಿಯವರು ಎಂದು ವಿಚಾರಿಸು....ಖಂಡಿತ ನನಗೆ ತುಂಬಾ ಕುತೂಹಲ....."

ರಾಮಚಂದ್ರ ಮಾತಾಡದೆ ಕುಲುಕುಲು ನಕ್ಕ.

ಮಡದಿಯೂ ತನ್ನ ದನಿಯನ್ನು ಹರಿಯಬಿಟ್ಟಳು.

* * * *

"ನನಗಾಗಿ ಒಂದು ಕೆಲಸ ಮಾಡುವೆಯಾ ?"

ಎದೆಯಾಳದಿಂದ ಕಾತರಪೂರ್ಣ ಧ್ವನಿ ಹೊರ ಹೊಮ್ಮಿದಾಗ ದಯಾರ್ದ್ರ ಹೃದಯ ಮಂಜಿನಂತೆ ಕರಗಿತು. ಒಂದೆರಡು ಕ್ಷಣ ಯೋಚಿಸಿ ನುಡಿದಳು ನಾಗವೇಣಿ,

"ಏನು ಹೇಳಿ ?"

"ನೋಡು, ಸಿಸ್ಟರ್ ! ನಾನು ಹೀಗೆ ಹೇಳಿದೆ ಎಂದು ಏನೂ ತಪ್ಪಾಗಿ ಭಾವಿಸಬೇಡಮ್ಮ.....ಡಾ|| ಬಾಲಕೃಷ್ಣ ಎಲ್ಲಿಯವರು....ತಾಯಿ ತಂದೆ ಇದ್ದಾರೆಯೆ ಎಂಬುದನ್ನು ತಿಳಿದು ಹೇಳುವೆಯಾ ?"

"ಏಕೆ ತಾತ ?"

"ನನಗೆ ಸ್ವಲ್ಪ ತಿಳಿದುಕೊಳ್ಳಬೇಕಾಗಿತ್ತು. ದಯಮಾಡಿ....."

"ಏನೂ ಕೋಪಿಸಿಕೊಳ್ಳಬೇಡಿ....ಅದೇಕೆ ನಿಮಗೆ ಅವರಲ್ಲಿ ಆಸಕ್ತಿ ಎಂದು ತಿಳಿಯಬಹುದೇ ?"

"ಈಗ ಅದನ್ನೆಲ್ಲಾ ಕೇಳಬೇಡ.........ಅನಂತರ ಎಂದಾದರೂ ನಿನಗೆ ಹೇಳುವೆ."

"ಯಾರ ಮೂಲಕ ತಿಳಿಯುವುದು ? ನನಗೆ ಅವರ ಕಡೆಯವರ ಪರಿಚಯವಿಲ್ಲ. ಆದರೂ, ನಿಮಗಾಗಿ ಪ್ರಯತ್ನಿಸುವೆ."

"ತುಂಬ ಥ್ಯಾಂಕ್ಸ್ !"

"ಇಲ್ಲಿಗೆ ಬಂದಾಗ ನೀವೇ ಕೇಳಬಹುದಲ್ಲ....ನೀವು ಕೇಳುವುದು ಸುಲಭವೇ. ಅದು ನೇರ ಮಾರ್ಗ...."

"ಆಗಲಿ, ಕೇಳೋಣ. ನೀನೂ ಒಂದುಸಲಿ ವಿಚಾರಿಸಿ ನೋಡು. ನಿನ್ನ ಗಮನಕ್ಕೆ ಬರುವ ವಿಚಾರದ ನಂತರ ಸೂಕ್ತವೆನಿಸಿದರೆ ನಾನು ಕೇಳಿ ತಿಳಿಯುವೆ."

"ನೀವಾದರೆ ಅವರನ್ನು ನೇರ ಕೇಳಬಹುದು.....ನನಗೆ ಕಷ್ಟ."

"ಬೇರೆಯವರ ಮೂಲಕವೇ ತಿಳಿದು ನೋಡು."

"ಆಗಲಿ, ತಾತ. ಪ್ರಯತ್ನಿಸುವೆ....ಈಗ ನೀವೊಂದು ಮಾತ್ರೆ ತೆಗೆದು ಕೊಳ್ಳುವುದಿದೆ."

"ಔಷಧ ತೆಗೆದುಕೊಳ್ಳಲಾರೆ-ಬಿಡಲಾರೆ ಹಾಗಾಗಿದೆ. ಶರೀರವೆಲ್ಲಾ ಔಷಧಿಮಯ.....ಉಸಿರಾಡಿದರೆ ಔಷಧಿಯ ವಾಸನೆಯೇ ಹೊಮ್ಮುತ್ತೆ."

ಅವಳು ಮಾತ್ರೆಯನ್ನು ನೀಡಿ ಹೊರಟಳು.

ಪರಶುರಾಂ ಕಿಟಕಿಯ ಕಡೆ ದೃಷ್ಟಿಯನ್ನು ಚೆಲ್ಲಿಕೊಟ್ಟ. ಅಶಕ್ತ ಶರೀರ ನಿಧಾನಗತಿಯಲ್ಲಿ ಉಸಿರಾಡುತಿತ್ತು. ನಿರ್ನಿಮೇಶನಯನಗಳ ದೃಷ್ಟಿಯಲ್ಲಿ ಯಾವ ಛಾಯೆ ಮಿನುಗಿತೋ....ಊಹಿಸುವುದು ಕಷ್ಟ. ಚಿದಾಕಾಶವನ್ನು ಡಾ|| ಬಾಲಕೃಷ್ಣ ಆವಸರಿಸಿದ್ದ. ಅಂತರಂಗ ಅವನೇ ತನ್ನ ಕರುಳ ಕುಡಿಯೆಂದು ಒಪ್ಪಿಕೊಂಡಿತ್ತು. ನಾನು ದೇಹ ಬಿಡುವ ಮುನ್ನ ಇದೊಂದು ಇತ್ಯರ್ಥವಾದರೆ ಸಾಕು ಶಿವನೇ.....ಎಂದು ಬೇಡಿಕೊಂಡುವು ಮನಃಚಿತ್ತಗಳು. ಯಾವ ದೇವತೆಯ ಅನುಗ್ರಹದಿಂದ ಪರಸ್ಪರ ದರ್ಶನವಾಗಿದೆಯೋ ಅದೇ ದೇವತೆಯ ಆಶೀರ್ವಾದದಿಂದ ಇದರ ಇತ್ಯರ್ಥವೂ ಆಗಿ ಹೋಗಲಿ.....

ಎದೆಯ ಹಕ್ಕಿ ಹಲವಾರು ದೇವತೆಗಳಲ್ಲಿ ಮೊರೆ ಇಟ್ಟಿತು.

* * * *

ದಿಗ್ದಿಗಂತವೆಲ್ಲ ಮಂಜಿನಿಂದ ಧೂಸರಿತವಾಗಿದ್ದರೂ ಸ್ವರ್ಣಂದಾಕಿನಿಯ ರಂಗೊರೆದಿತ್ತು ಗಗನದೇಶಕ್ಕೆ.

ಸುಡುಬಿಸಿಲಿನ ಬೇಗೆಗೆ ತಂಪಿನ ಮಳೆಗರೆದ ಪ್ರಾತಃವಾತಾವರಣ ದಿಂದಲೂ ಚಿತ್ತಕಲ್ಪ ತಣಿಯದು. ಒಮ್ಮೆ ತಂಪೆನಿಸಿದರೂ ಇನ್ನೊಮ್ಮೆ ನರನಾಡಿಗಳಲ್ಲಿ ಸಂಕಟದ ಝುರಿಯ ಪ್ರವಾಹ. ಸ್ವೇದಬಿಂದುಗಳಿಂದ ತೊಯ್ದು ಮೈಮುಖಗಳನ್ನು ಕರವಸ್ತ್ರದಿಂದ ಒರಿಸಿಕೊಂಡ ಪರಶುರಾಂ. ಔಷಧಿ-ಲೋರ್ಷಗಳ ಕಟುವಾಸನೆ ಮನಃಪ್ರಾಣಗಳನ್ನು ತುಂಬಿ ಇನ್ನು ಔಷಧಿಯೇ ಬೇಡ ಎಂಬಷ್ಟು ಜುಗುಪ್ಸೆ; ಔಷಧಿ ತಿಂದೂ ತಿಂದೂ ಮೈಯೆಲ್ಲ ಔಷಧಿಮಯ; ಇನ್ನು ಗುಣವಾಗುತ್ತೆ ಎಂಬುದು ಕನಸಿನ ಮಾತು ಎಂಬ ಧೋರಣೆಯ ಪರಿಪಾಠ.....

ವೈದ್ಯರ ತಂಡ ಆಗಮಿಸಿತು. ಡಾ|| ಬಾಲಕೃಷ್ಣ ಪ್ರಸನ್ನಮುಖಿ ಯಾಗಿ ಸನಿಹಕ್ಕೈತಂದ. ಅರ್ಧ ತೋಳಿನ ಅಂಗಿ ತೊಟ್ಟಿದ್ದಾನೆ. ದಟ್ಟ ಪುಷ್ಟವಾದ ಕೈಗಳು....

ಪರಶುರಾಂ ಎದ್ದು ಕುಳಿತುಕೊಳ್ಳಲು ಪ್ರಯತ್ನಿಸಿದ.

"ಏಳಬೇಡಿ....ಏಳುವುದೇಕೆ ?"

"ಎದ್ದು ಕುಳಿತರೇನೇ ಹಿತ."

ಏಳಲಾರದೇ ಏಳಲು ಪ್ರಯತ್ನಿಸಿದಾಗ ಯಾರೋ ತೋಳು ಹಿಡಿದು ಕುಳಿತುಕೊಳ್ಳಲು ಸಹಾಯ ಮಾಡಿದರು. ಆ ಕ್ಷಣವೇ ಅರಳುಗಂಗಳು ವೈದ್ಯನ ಕೈಕಡೆ ಹರಿದುವು. ನೋಡೆ, ಅದೇ ಹರವಾದ ಮಚ್ಚೆ! ನನ್ನ ಬಾಲಕೃಷ್ಣನ ಮಚ್ಚೆ!! ಒಡನೆ ದೇಹದಾದ್ಯಂತ ಭಾವೋದ್ವೇಗದ ಝುರಿ ಝಿಲ್ಲನೆ ಹರಿದಾಡಲಾರಂಭಿಸಿತು. ಎಷ್ಟೇ ಪ್ರಯತ್ನಿಸಿದರೂ ತನ್ನನ್ನು ತಾನು ಹತೋಟಿಯಲ್ಲಿಟ್ಟುಕೊಳ್ಳಲಾಗಲಿಲ್ಲ. ಸ್ವಲ್ಪ ಉದ್ವೇಗದಿಂದ ಕೂಡಿದರೂ ಶಾಂತಸ್ನಿಗ್ಧವಾಣಿಯಲ್ಲಿ ನುಡಿದ "ನೀವು ತಪ್ಪಾಗಿ ಭಾವಿಸದಿದ್ದರೆ ನಾನೊಂದು ಪ್ರಶ್ನೆ ಕೇಳಬೇಕೆಂದಿರುವೆ ಡಾಕ್ಟರ್!"

"ಏನು ಹೇಳಿ.....ತಪ್ಪು ತಿಳಿಯುವುದೇನಿದೆ ಇದರಲ್ಲಿ ?"

"ನಿಮ್ಮ ಎಡಗೈ ಸುಟ್ಟಗಾಯದ ಕಲೆ ನೋಡಿದಾಗ ನನಗೆ ಮೂಡಿದ್ದ ಒಂದು ಸಂಶಯ ಇಂದು ಬಲಗೈ ಮಚ್ಚೆ ನೋಡಿದೊಡನೆ ಇನ್ನಷ್ಟು ಬಲಿ ಯಿತು. ಹೇಳದೆ.....ಯಿಲ್ಲ....."

"ಸಂಶಯ.....? ಅಂದರೆ ಅರ್ಥವಾಗಲಿಲ್ಲ. ಯಾವ ಸಂಶಯ ?"

"ದಯವಿಟ್ಟು ನಿಮ್ಮ ಪೂರ್ವೋತ್ತರಗಳನ್ನು ಹೇಳುವಿರಾದರೆ....."

"ಏಕೆ ಅರ್ಧ ಮಾತು ? ಸರಿಯಾಗಿ ಬಿಡಿಸಿ ಹೇಳಿರಿ."

"ಡಾಕ್ಟರೇ? ಹೇಳಿಕೊಳ್ಳಲು ಬಾಯಿ ಬರುವುದಿಲ್ಲ. ಆದರೆ, ನನ್ನ ಅನುಮಾನ ಕ್ಷಣ ಕ್ಷಣಕ್ಕೂ ಬಲಿಯುತ್ತಿದೆ.....ನೀವು ಯಾರ ಮಗ ಎಂಬುದನ್ನು ತಿಳಿಯಬಹುದೇ ?"

"ನಾನು ಶ್ರೀನಿವಾಸನ್ ಎಂಬುವರ ಮಗ."

"ತಾಯಿ ತಂದೆ ಇದ್ದಾರೆಯೇ ?"

"ಇದ್ದಾರೆ."

"ನೀವು ಅವರ ಸ್ವಂತ ಮಗನೇ ?"

ಬಾಲಕೃಷ್ಣ ನಗುನಗುತ್ತ ಉತ್ತರಿಸಿದ "ಅದಕ್ಕೆ ಉತ್ತರ ನಮ್ಮ ತಾಯಿ ತಂದೆ ಹೇಳಬೇಕು !"

ಒಡನೆ ಎಲ್ಲರ ಮುಖದಲ್ಲೂ ನಗೆಯ ಗುಲ್ಲೆದ್ದಿತು.

"ಹಾಗೆನ್ನ ಬೇಡಿ. ಈ ವಿಚಾರ ನಿಮಗೆ ಸ್ವಲ್ಪವಾದರೂ ತಿಳಿಯದೇ ಇರಲಾರದು."

ಪುನಃ ಎಲ್ಲೆಡೆಯೂ ನಗುವಿನ ಗುಲ್ಲು.

"ನಾನೊಬ್ಬ ನತದೃಷ್ಟ ವ್ಯಕ್ತಿ...."

"ಇರಲಿ, ನಿಮಗೆ ಇದನ್ನು ತಿಳಿದುಕೊಳ್ಳುವುದರಿಂದ ಏನು ಪ್ರಯೋಜನ ?"

"ಇದೆಯಪ್ಪಾ ತುಂಬಾ ಪ್ರಯೋಜನವಿದೆ. ಅಂದರೆ, ಆರ್ಥಿಕವಾಗಿ ಅಂದುಕೊಳ್ಳಬಾರದು. ಮಾನಸಿಕವಾದ ಶಾಂತಿ ಲಭಿಸುವುದು ಖಂಡಿತ. ಒಂದು ಕಾಲದಲ್ಲಿ ನಿಮ್ಮೆಲ್ಲರಂತೆಯೇ ನಾನೊಬ್ಬ ಗಣ್ಯವ್ಯಕ್ತಿ. ಕೈತುಂಬ ದುಡಿದು ಮಕ್ಕಳನ್ನು ಓದಿಸಿ ಉನ್ನತ ಪಟ್ಟಕ್ಕೇರಿಸಿದವನು. ಈಗ ಈ ವೃದ್ಧಾಪ್ಯದಲ್ಲಿ ಸೋತು ಸುಣ್ಣವಾಗಿ ಹಾಸಿಗೆ ಹಿಡಿದಿರುವೆ. ಅದಿರಲಿ, ಕೊನೆಗಾಲದಲ್ಲಿ ಎಲ್ಲರ ಪಾಡೂ ಇಷ್ಟೆ. ನನ್ನ ಮನದಲ್ಲಿರುವ ಸಂಶಯ ಎಂದರೆ ನಾನು ಪಾಂಡುರಂಗನ ಸನ್ನಿಧಿಗೆ ಹೋಗಿ ಆರು ವರ್ಷದ ಮಗ ನನ್ನು ಕಳೆದುಕೊಂಡೆ ; ಚಿಕ್ಕ ಮಗುವಲ್ಲ, ಆರು ವರ್ಷದ ಮಗ ! ಶಾಲೆಗೆ ಹೋಗಿ ಬರುತ್ತಿದ್ದ ಮಗನನ್ನು ಕಳೆದುಕೊಂಡುದು ದುರದೃಷ್ಟ. ತುಂಬಾ ಜನಸಂದಣಿ ಇದ್ದುದರಿಂದ ಮಗು ತಪ್ಪಿಸಿಕೊಂಡಿತು. ಅವನ ಹೆಸರು

ಬಾಲಕೃಷ್ಣ. ತುಂಬಾ ಚೂಟಿಯಾದ ಮಗು. ಜಾತಕದ ಪ್ರಕಾರ ಅವನು ತುಂಬಾ ಉಚ್ಛ್ರಾಯ ಸ್ಥಿತಿಗೆ ಬರಬೇಕಿತ್ತು. ನಾವು ಹುಡುಕುವಷ್ಟು ಹುಡುಕಿ ಪೋಲೀಸಿಗೆ ದೂರುಕೊಟ್ಟು ಎಷ್ಟೆಷ್ಟು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ತಿಂಗಳುಗಟ್ಟಲೆ ಹುಡುಕಿ ಹುಡುಕಿ ಹಿಂದಿರುಗುವಾಗ ನಾವು ದಂಪತಿಗಳು ಅರ್ಧ ಸತ್ತೇ ಹೋಗಿದ್ದೆವು. ಅನಂತರ ಸುದ್ದಿಯಾಗಲೀ, ಸುಳಿವಾಗಲೀ ಎಲ್ಲಿಯೂ ದೊರೆಯಲಿಲ್ಲ. ಕೃಷ್ಣ ಜಯಂತಿಯಂದು ಹುಟ್ಟಿದ ಮಗು. ಬಾಲಕೃಷ್ಣ ಎಂದು ಹೆಸರಿಟ್ಟಿದ್ದೆ. ನಾಲ್ಕು ವರ್ಷದವನಿದ್ದಾಗ ಬೆಂಕಿಗೆ ಬಿದ್ದು ಎಡ ಮುಂಗೈಯ ಮೇಲೆ ಆದ ಸುಟ್ಟ ಗಾಯ ಗುಣವಾಗಲು ಮೂರು ನಾಲ್ಕು ತಿಂಗಳೇ ಬೇಕಾಯ್ತು. ಬಲಗೈಯಲ್ಲಿ ನಿಮ್ಮಂತೆಯೇ ಹುಟ್ಟು ಮಚ್ಚೆಯಿತ್ತು. ಅವೆರಡೂ ಗುರುತುಗಳು ನಿಮ್ಮ ಕೈಗಳ ಮೇಲಿವೆ. ಅದಕ್ಕೇ ಕೇಳಿದೆ....." ಮಾತು ಮುಗಿಯುವುದರೊಳಗಾಗಿ ಕಂಠ ಗದ್ಗದವಾಗಿ ಕಣ್ಣುಗಳಲ್ಲಿ ನೀರಾಡಿತು.

"ಅಯ್ಯೋ, ಅದಕ್ಕೇಕೆ ದುಃಖ ? ನನ್ನನ್ನೇ ನಿಮ್ಮ ಬಾಲಕೃಷ್ಣ ಎಂದುಕೊಳ್ಳಿ !"

ತನ್ನಿತರ ಗೆಳೆಯರೊಂದಿಗೆ ನಗೆ ಮಾತಿನ ಗುಳ್ಳೆಬ್ಬಿಸಿ ಹಾಸ್ಯದ ರಸಾರ್ದ್ರ ಧಾರೆಯನ್ನು ಹರಿಸುತ್ತ ಅಲ್ಲಿಂದ ಹೊರಬಿದ್ದ ಡಾ|| ಬಾಲಕೃಷ್ಣ! ಎಲ್ಲರೂ ಅವನನ್ನು ಗೇಲಿ ಮಾಡುತ್ತ ಹಾಸವಿಲಾಸಗಳನ್ನು ಹರಿಸಿದುದೂ ಕೇಳಿ ಬಂತು.

ಪರಶುರಾಂ ಆಶ್ಚರ್ಯಗರ್ಭಿತ ದೃಷ್ಟಿಯನ್ನು ಬಾಗಿಲ ಕಡೆ ಹರಿಸಿ "ಅಯ್ಯೋ ಹೊರಟೇ ಹೋದ !" ಎಂದುಕೊಂಡ. ಅಂತರ್ವಾಣಿ ಕೂಗಿ ಹೇಳಿತು "ಖಂಡಿತ ಅವನು ನಿನ್ನ ಮಗನೇ !"

ಎದೆಯಾಳದಿಂದ ಬಿಸಿಯುಸಿರೊಂದು ತನಗರಿಯದಂತೆಯೇ ಹೊರಬಿತ್ತು. ಬಾಳು, ಬದುಕು, ಆಸೆ, ಆಕಾಂಕ್ಷೆಗಳು ಯಾವತ್ತೂ ಮರೀಚಿಕೆಯೇ.....



# ಗೂಢಾತಿಗೂಢ

## ೭

**ಚಿತಾಯಾಶ್ಚ ಚಿಂತಾಯಾಶ್ಚ ಬಿಂದು ಮಾತ್ರಂ ವಿಶಿಷ್ಯತೆ।**

ಶ್ರಾವಣಪರ್ವ ಆರಂಭವಾದಾಗಲೇ ಶ್ರಾವಣಪ್ರಭುವಿನ ಆಟೋಪ ದಿಂದ ಲೋಕವೆಲ್ಲ ಜಲಮಯ.

ಎಡೆವಿಡದ ಮಳೆ. ಮಳೆ. ಮಳೆ. ಕುಂಭದ್ರೋಣ ಮಳೆ !

ಎಂದಿಗೆ ಈ ವರ್ಷಾಕಾಲ ಮುಗಿಯುತ್ತೋ ಎಂದು ಬೇಸರಿಸುವಂತಹ ಭೈರವ ವರ್ಷ. ಕೆರೆ ಕಟ್ಟೆಗಳು ತುಂಬಿ ಕೋಡಿ ಹರಿಯುತಿದ್ದುವು. 'ಧಾಂ' ನದಿಯಲ್ಲಿ ಜುಳುಜುಳು ರಾಗಮಾಲೆ ಹಗಲಿರುಳೂ ಒಂದೇ ಸಮನೆ ಹೊಮ್ಮುತ್ತಿತ್ತು. ಹೆಚ್ಚು ದೂರವಲ್ಲದ ನದಿಯು ಮೊರೆತ ಅಂತಸ್ಥಲವನ್ನು ತಾನೆ ತಾನಾಗಿ ಮುಟ್ಟುತ್ತದೆ.

ಕಳೆದ ಮೂರು ದಿನಗಳಿಂದ ಸ್ವಲ್ಪಸ್ವಲ್ಪವಾಗಿ ಕಡಿಮೆಯಾಗುತಿದ್ದ ಮಳೆ ಇಂದು ವಿರಾಮ ಹೊಂದಿದರೂ ಸೂರ್ಯದರ್ಶನವಾಗಲಿಲ್ಲ. ಅತೀವ ಥಂಡಿ ವಾತಾವರಣ. ಉಣ್ಣೆಯ ಶ್ರೀರಕ್ಷೆಯಿಲ್ಲದಿದ್ದರೆ ಹೊರ ತಲೆ ಹಾಕು ವುದು ಕಷ್ಟವೇ. ಗಿಡಮರಗಳ ಎಲೆ ಹೂವು ಒಣಕಡ್ಡಿಗಳು ನೆಲಕಂಡಿದ್ದುವು. ನೆಲ ಜಲಮಯ ಮಾತ್ರವಲ್ಲ, ಕಳೆ-ಕಸಗಳ ಶ್ರೀದರ್ಶನವೂ ಹೌದು.

ಮಳೆ ನಿಂತುದರಿಂದ ಎಷ್ಟೋ ಸಮಾಧಾನ. ಜಡಿ ಮಳೆಯಿಂದಾಗಿ ಎರಡು ವಾರಗಳಿಂದ ಕೆಲಸ ಸಂಪೂರ್ಣ ನಿಂತು ಹೋಗಿತ್ತು. ಕೆಸರು

ತುಂಬಿದ ನೆಲ. ಎಲ್ಲಿ ಕಾಲಿಟ್ಟರೆ ಅಲ್ಲಿ ಹುಗಿಯುವಷ್ಟು ನಿಂತ ನೀರು. ಒಂದು ವಾರ ಚೆನ್ನಾಗಿ ಬಿಸಿಲು ಬಂದಲ್ಲದೆ ಕೆಸರು ಆರದು.

ಸೂರಿಗಾಂ ವಲಯದಲ್ಲಿ ನನ್ನದು ಚಂಪಕಾ ಎಸ್ಟೇಟ್. ಬಹಳ ಹಿಂದೆ ಒಬ್ಬ ಯೂರೋಪಿಯನ್ನನ ಎಸ್ಟೇಟ್. ಕಾಲಾನಂತರ ಕ್ರಮಕ್ರಮವಾಗಿ ಕೆಲವಾರು ಮಂದಿಯ ಕೈವಶವಾದ ಬಳಿಕ ನಮ್ಮ ಕೈಸೇರಿತು. ಆನಂತರ ಈ ಭೂಮಿ ನಮ್ಮ ಒಡೆತನದಲ್ಲಿಯೇ ಉಳಿದಿರುವುದು ಸ್ತುತ್ಯವಾದ ಸಂಗತಿ. ಏರು ಪ್ರದೇಶದಲ್ಲಿ ಹೆಂಚಿನ ವಾಸಗೃಹ. ಅದನ್ನು ಕಟ್ಟಿದವನು ಯೂರೋಪಿಯನ್ನನೇ.

ಬೆಳಗಿನ ಪತ್ರಿಕಾ ವಿಹಾರಕ್ಕಾಗಿ ವರಾಂಡದಲ್ಲಿ ಮಂಡಿಸಿದೆ. ಚಿಕ್ಕ ಮೇಜಿನ ಮೇಲೆ ವರ್ತಮಾನ ಪತ್ರಿಕೆಗಳು ತುಂಬಿ ಹೋಗಿದ್ದುವು. ಮಾಸಿಕ–ತ್ರೈಮಾಸಿಕಗಳೂ ಇವೆ. ನಾನು ತಿರಿವಿ ಹಾಕಿದ್ದು ವರ್ತಮಾನ ಪತ್ರಿಕೆ. ಈ ದಿನ ಶಹರಕ್ಕೆ ಹೋಗಿ ಬರುವ ಅವಶ್ಯಕತೆಯೂ ಇಲ್ಲ. ಈ ಥಂಡಿ ವಾತಾವರಣದಿಂದ ಮನಸ್ಸಿಗೆ ಮುಜುಗರ.

ತುದಿಗಾಲಿನಲ್ಲಿ ಸೀರೆಯ ನಿರಿಗಳನ್ನು ಚಿಮ್ಮುತ್ತ ಹೊರ ಬಂದ ಸುಮಿತ್ರ ಕೇಳಿದಳು "ಈದಿನ ಶಹರಕ್ಕೆ ಹೋಗುವುದುಂಟೇನು ?"

"ಹೋಗಬೇಕಿತ್ತು.....ಮನಸ್ಸೇ ಇಲ್ಲ. ಬಿಡು, ನಾಳೆ ನಾಡಿದ್ದು ಹೋದರಾಯಿತು."

ಅವಳಿಗೆ ಅಗತ್ಯವಾಗಿ ಕೆಲವು ಸಾಮಗ್ರಿಗಳು ಬೇಕಿವೆ ಎಂಬುದು ನನಗೂ ಗೊತ್ತು. ಸಧ್ಯ ಹೇಗಾದರೂ ಕಳೆದರಾಯ್ತು, ಎಂಬ ಸಮಾಧಾನ. ನನ್ನ ಉತ್ತರಕ್ಕೆ ಪ್ರತಿ ಹೇಳದೆ ಅವಳು ಒಳ ಹೋದಳು ನಾನು ಪ್ರತಿಕಾವಲೋಕನವನ್ನು ಮುಗಿಸಿದರೂ ಮಳೆಯ ತುಂತುರು ತುಂತುರು ಹನಿಗಳು ಬೀಳುತ್ತಲೇ ಇದ್ದುವು. ಮಂಜುಮುಸುಕಿದ ವಾತಾವರಣ. ಮೈ ನಡುಗಿಸುವಂತಹ ಚಳಿಯ ಅವತರಣಿಕೆ.....

ಸುಮಿತ್ರ ಒಳ ಹೋದುದರಿಂದ ಇನ್ನೊಮ್ಮೆ 'ಶಹರಕ್ಕೆ ಹೋಗಲೇ ಬೇಕೆ' ಎಂದು ಕೇಳುವ ಪ್ರಸಂಗ ಬರಲಿಲ್ಲ. ಅವಳು ಇದ್ದುದರಲ್ಲಿ ಪೂರೈಸುತ್ತಾಳೆ ಎಂಬುದು ಅಂದಿಂದಿಗೂ ಮನವರಿಕೆಯಾದ ವಿಷಯ. ನಾನು ಆ ಯೋಚನೆಯಿಂದ ಮುಕ್ತನಾದೆ.

ಶಹರಕ್ಕೆ ಹೋಗಬೇಕಾದರೆ ಜನಸೇವಾ ಕ್ಲಿನಿಕ್ ಮುಂದೆಯೇ ಹಾದು ಹೋಗಬೇಕು. ಹಾಗೆ ಅದರ ಮುಂದೆ ಹಾಯ್ದು ಹೋಗುವಾಗ ಅಲ್ಲಿ ಅಮ್ಮ ನರಳಿದ ಕರುಣಾಜನಕ ದೃಶ್ಯ ಕಣ್ಮುಂದೆ ಸುಳಿಸುಳಿದಳಿಯುತ್ತದೆ. ಜಾರಿಬಿದ್ದು ಸೊಂಟದ ಕೀಲು ತಪ್ಪಿ ಮೂರೂವರೆ ತಿಂಗಳು ಪ್ರಾಣಾಂತಕ ನೋವಿನಿಂದ ನರಳಿದ ಬಗೆ ಹೃದಯವನ್ನು ಗಾಣಕ್ಕೆ ಕೊಟ್ಟಂತೆ ಹಿಂಡುತ್ತದೆ; ದುಃಖ-ಸಂಕಟಗಳಿಂದ ಮನಸ್ಸು ನರಳುತ್ತದೆ. ದೈವಾಯತ್ತಾಗಿ ಒದಗಿದ ಮರಣ ಸಂಕಟವನ್ನು ಅನುಭವಿಸಲಾಗದೆ "ನನಗೆ ವಿಷದ ಇಂಜಕ್ಷ್ನ" ಕೊಡಿ ಎಂದು ಅವರು ಡಾಕ್ಟರುಗಳಿಗೆ ಕೈಮುಗಿದು ಬೇಡುತ್ತಿದ್ದ ಸಂಕಟಪೂರ್ಣ ಬೇಡಿಕೆ ಕರ್ಣಪಟಲಗಳ ಮೇಲೆ ಮೊರೆಯುವುದರಿಂದ ಆ ಕಡೆ ಹೋಗಿ ಅದನ್ನು ಸ್ಮರಿಸಿಕೊಳ್ಳುವುದೇ ಬೇಡ ಎಂಬಷ್ಟು ಮುಜುಗರ ಮನಸ್ಸಿಗೆ. ಅಂತೂ, ದುರ್ವಿಧಿ ಕಳೆದ ತಿಂಗಳು ಅವರ ಜೀವನ್ಮರಣ ಹೋರಾಟಕ್ಕೆ ಇತಿಶ್ರೀ ಹಾಡಿತು.

* * * *

ಮನಸ್ಸಿಗೆ ಏನೋ ಒಂದು ಬಗೆಯ ಅಶಾಂತಿ. ಅದರ ಮೂಲ ಏನೆಂಬುದನ್ನು ಊಹಿಸುವುದು ಕಷ್ಟ. ಅಮ್ಮನ ದುರ್ಮರಣ ಕಾರಣವಿರಬಹುದಾದರೂ, ಅದಾಗಲೇ ಮುಗಿದ ಅಧ್ಯಾಯ. ಮಾನಸಿಕ ಅಶಾಂತಿಗೆ ಅದೇ ಪೂರ್ತಿ ಕಾರಣವೆಂದು ಭಾವಿಸಲಾರೆ. ಅಂತೂ, ಏನೋ ಒಂದು ಬಗೆಯ ಕಿನಿಸಿಗೆ; ಇನ್ನೇನೋ ಒಂದು ಬಗೆಯ ಅಸಮಾಧಾನ; ಅನುಭವಿಸಲಾಗದ ಅಶಾಂತಿ. ಪತ್ರಿಕೆ ಓದಿದರೆ ವಿಷಯ ಗ್ರಹಣ ಮಾಡಲಾಗದಷ್ಟು ಅಶಾಂತಿ. ವರಾಂಡದಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಶತಪಥ ತಿರುಗಿದೆ.

ಸುಮಿತ್ರ ಹಣ್ಣು ಹೂವುಗಳೊಡನೆ ಹೊರಬಂದು ಹೇಳಿದಳು"ಇಂದಿಗೆ ತಿಂಗಳು.....ಅಮ್ಮನ ಸಮಾಧಿಗೆ ಹೂವಿಟ್ಟು ಬರೋಣ."

ನಾನು ಅವಳೊಂದಿಗೆ ಹೊರಟೆ.

ಸಮಾಧಿ ಇರುವುದು ಚಂಪಕಾ ಎಸ್ಟೇಟಿನ ಹರವಾದ ಬಯಲಿನಲ್ಲಿ. ಅದು ಏರು ಪ್ರದೇಶವಾದುದರಿಂದ ನಮ್ಮ ನಡಿಗೆ ಏರು ಮುಖವೇ. ಆ ತಾಣವನ್ನು ಮುಟ್ಟುವಷ್ಟರಲ್ಲಿ ಏದುಸಿರು ಹತ್ತುತ್ತದೆ. ನನಗಾದರೆ ಅದು ವಿಶೇಷವಲ್ಲ; ದಿನವೂ ನಾಲ್ಕಾರು ಮೈಲಿ ಎಸ್ಟೇಟಿನಲ್ಲಿ ಸುತ್ತಾಡುವವನೇ. ಸುಮಿತ್ರ

ಳಿಗೆ ಸ್ವಲ್ಪ ಕಷ್ಟ. ಅವಳ ನಡಿಗೆಗೆ ಅನುಗುಣವಾಗಿ ನಾನೂ ನಡೆದೆ; ಹಾದಿ ನಿಧಾನವಾಗಿ ಸಾಗಿತು. ಎಸ್ಟೇಟಿನ ಹಸಿರು ವಲಯದಲ್ಲಿ ಮೊಳಗುವ ಪಕ್ಷಿಗಳ ಕಲಕಲರವ ಅಂತಸ್ಥಲವನ್ನು ಮುಟ್ಟಿ ಆನಂದಿತಗೊಳಿಸುವಂತಹ ಸುರಮ್ಯ ಸನ್ನಿವೇಶ. ಶಾಂತ ಸಮೃದ್ಧ ವಾತಾವರಣ. ಟೀಗಿಡಗಳ ಸಮುದಾಯದ ಮಹಾ ವಿಸ್ತೀರ್ಣ. ಪಚ್ಚವರ್ಣದ ಹಾಸಿ. ತೋಟದ ಮಧ್ಯೆ ಹರಿದ ಮೂರಡಿ ಅಗಲದ ಕಾಲು ಹಾದಿಯು ನೇರವಾಗಿ ಸಮಾಧಿಯಂಗಣಕ್ಕೆ ಮುಟ್ಟುತ್ತದೆ. ಸುಮಿತ್ರೆಯ ಆಮೆಗತಿಯಿಂದಾಗಿ ನಾವು ಅಲ್ಲಿಗೆ ಸೇರಲು ಒಂದು ಗಂಟೆ ತೆಗೆದುಕೊಂಡೆವು. ಆ ಹರವಾದ ತಾಣದಲ್ಲಿ ನಮ್ಮ ಹಿರಿಯರೆಲ್ಲಾ ತಣ್ಣಗೆ ಮಲಗಿದ್ದಾರೆ. ಎತ್ತರವಾದ ಬೆಟ್ಟದಾಣ. ಅಲ್ಲೊಂದು ಇಲ್ಲೊಂದರಂತೆ ವಿರಳವಾದ ಹೆಮ್ಮರಗಳು. ತೋಟದಾಡಳಿತ ನನ್ನ ಕೈಗೆ ಬಂದ ಮೇಲೆ ನಾನು ಹೂ ಮರಗಳನ್ನು ವಿಶೇಷವಾಗಿ ನಡೆಸಿದ್ದುದರಿಂದ ಒಂದಲ್ಲ ಒಂದು ಬಗೆಯ ಹೂಗಳು ಇದ್ದೇ ಇರುತ್ತವೆ ಅವುಗಳಲ್ಲಿ. ಬೇಸಿಗೆಯಲ್ಲಿ ಕ್ಯಾಷಿಯಾ ಮರಗಳ ವೈಭವ ಅಲ್ಲಿ ನೋಡಬೇಕು.

ಅಮ್ಮನ ಸಮಾಧಿ ಇನ್ನೂ ಹಸಿಯಾಗಿಯೇ ಇತ್ತು. ಮಳೆಗಾಲವಾದುದರಿಂದ ಅದು ಒಣಗುವ ಸಾಧ್ಯತೆಯೂ ಇರಲಿಲ್ಲ. ಸುಮಿತ್ರ ಉದ್ದನೆಯ ಹೂಮಾಲೆ ಕಟ್ಟಿ ತಂದಿದ್ದಳು. ಬಿಡಿ ಹೂಗಳೂ ಇದ್ದುವು. ನಾವಿಬ್ಬರೂ ಹೂವಿಟ್ಟು ಊದುಬತ್ತಿ ಕರ್ಪೂರ ಹೊತ್ತಿಸಿ ಪ್ರದಕ್ಷಿಣೆ ನಮಸ್ಕಾರ ಮಾಡಿದೆವು. ಅನಂತರ ಎಲ್ಲಾ ಸಮಾಧಿಗಳ ಮೇಲೂ ಹೂವಿಟ್ಟು ವಂದನೆ ಸಲ್ಲಿಸಿದೆವು ; ಒಡಲಾಳದಲ್ಲಿ ಸಂಕಟವನ್ನು ಹುಗಿದಿಟ್ಟು.

ಪ್ರಕೃತಿ ಸೌಂದರ್ಯದ ಬೀಡಾದ ಆ ತಾಣಕ್ಕೆ ಹೋದರೆ ಹಿಂದಿರುಗಲು ಮನಸ್ಸು ಬಾರದು. ಯಾವತ್ತೂ ಸತ್‌ಶಾಂತಿ ಹೆಪ್ಪುಗಟ್ಟಿರುತ್ತೆ ಅಲ್ಲಿ. ಸದಾಕಾಲ ಪಕ್ಷಿಕೂಜನ ಮಾಧುರ್ಯ ಮೈಮನಗಳನ್ನು ಮಂತ್ರಮುಗ್ಧಗೊಳಿಸುವಷ್ಟು ಮೋಹಕ. ಇಲ್ಲಿಗೆ ಬಂದಾಗಲೆಲ್ಲಾ ನನ್ನ ಮನಸ್ಸಿನ ಅಶಾಂತಿ ಹೇಳಹೆಸರಿಲ್ಲದಷ್ಟು ಅಳಿಸುವುದು ಖಂಡಿತ. ಅನಂತರ ...ಅನಂತರ, ನಾನು ಬೆಟ್ಟವಿಳಿದು ಮನೆಮುಟ್ಟಿ ದಿನಚರಿಯಲ್ಲಿ ತೊಡಗಿದ ನಂತರ ಅಶಾಂತಿ ಕಟ್ಟಿಟ್ಟ ಬುತ್ತಿ. ಎಂಬುದು ಆತ್ಮಗತ.

ನಾವು ಬಂಗಲೆಯನ್ನು ಮುಟ್ಟಿದಾಗ ಸುಮಾರು ಹತ್ತು ಗಂಟೆ. ಬಾಲ ಸೂರ್ಯ ಕಾವೇರತೊಡಗಿದ್ದ. ತೋಟವಾರ್ಧಿಯ ತಣ್ಗಂಪು ಮಂಗಳ ಮಾಯವಾಗಿ ಅತ್ಯಂತ ಹಿತಕರ ಹವೆಯು ಆವಿರ್ಭೂತವಾಯಿತು. ಸುಮಿತ್ರ ಒಳಹೊಕ್ಕು ದಿನಚರಿಯಲ್ಲಿ ತೊಡಗಿದಳು. ನಾನು ಪ್ರಾಂಗಣದ ಉದ್ಯಾನದಲ್ಲಿ ಪ್ರಶಾಂತ ವಾತಾವರಣಕ್ಕೆ ಮೈಗೊಟ್ಟು ಅಡ್ಡಾಡತೊಡಗಿದೆ, ಇಕ್ಕೆಲಗಳಲ್ಲಿ ಪುಷ್ಪಭರಿತ ಪಾತಿಗಳ ನಡುವೆ ಹರಿದ ಸುಂದರ ಹಾದಿಯಲ್ಲಿ.

*　　　*　　　*　　　*

ತೋಟದ ಒಳಾಂತರದಲ್ಲಿ ಜೀಪು ಹರಿದುಬಂದ ಯಂತ್ರ ಶಬ್ದ ಕಿವಿಗಳನ್ನು ಮುಟ್ಟುತ್ತಲೂ ದೃಷ್ಟಿ ಸಹಜವಾಗಿ ಅತ್ತ ಹೊರಳಿತು. ಹಸಿರು ಗಿಡಗಳ ಮಹಾ ವಿಸ್ತಾರದ ಮಧ್ಯೆ ಜೀಪು ದೊಡ್ಡ ಸದ್ದಿನೊಂದಿಗೆ ಹರಿದು ಬಂದು ಗಕ್ಕನೆ ನಿಂತಿತು. ವ್ಯಕ್ತಿ ಎಂಜಿನ್ ನಿಲ್ಲಿಸಿ ಕೆಳಗಿಳಿದು ಬಂದ. ನೋಡಿದರೆ ನನ್ನ ಆತ್ಮೀಯ ಗೆಳೆಯ ನರಹರಿ! ಅವನನ್ನು ನೋಡಿ ವರ್ಷವೇ ಕಳೆದಿತ್ತೇನೋ.....ಸಂತಸದಿಂದ ಹಸ್ತಲಾಘವ ನೀಡಿ ಆತ್ಮೀಯತೆಯಿಂದ ಬರಮಾಡಿಕೊಂಡೆ. ಅವನು ಬರಬರುತ್ತಲೇ ವಿಷಾದವಾಣಿಯಲ್ಲಿ ಅಮ್ಮನ ದುರಂತ ಮರಣಕ್ಕೆ ಅನುತಾಪ ವ್ಯಕ್ತಪಡಿಸಿ ನುಡಿದ "ಅವರು ಗತಿಸಿದ ವಿಚಾರ ಮೊನ್ನೆಯಷ್ಟೆ ತಿಳಿಯಿತು. ನೀನೊಂದು ಕಾಗದವನ್ನೂ ಬರೆಯಲಿಲ್ಲವಲ್ಲಾ?"

"ಮೂರು-ನಾಲ್ಕು ತಿಂಗಳು ಆ ಗೋಳಿನಲ್ಲಿಯೇ ಉರುಳಿಹೋಯಿತು. ಕಾಗದ ಬರೆಯುವಷ್ಟು ಸಮಯ-ಸಹನೆ ಎರಡೂ ಇರಲಿಲ್ಲ, ನರಹರಿ."

"ಏನಾಯ್ತು? ತುಂಬಾ ಚಟುವಟಿಕೆಯ ವ್ಯಕ್ತಿಯಲ್ಲವೇ?"

"ಜಾರಿಬಿದ್ದುದು ಚಟುವಟಿಕೆಯ ಕಾರಣದಿಂದಲೇ ಇರಬಹುದು. ಸೊಂಟದ ಕೀಲು ತಪ್ಪಿತು. ಆಪರೇಶನ್ ಆಯಿತು. ಆದರೂ ಪ್ರಯೋಜನವಾಗಲಿಲ್ಲ. ಒಂದು ವೇಳೆ ಬದುಕಿದ್ದರೆ ಜೀವಮಾನವೆಲ್ಲಾ ಹಾಸಿಗೆಯಲ್ಲೇ ನರಳಬೇಕಿತ್ತು. ಅಂತೂ, ಭಗವಂತ ಆಯಸ್ಸು ನೀಡದೆ ನರಳುವಿಕೆಯನ್ನು ಕೊನೆಗಾಣಿಸಿದ. ಅದೊಂದಕ್ಕೆ ನಾವು ಆತನಿಗೆ ಕೃತಜ್ಞತೆ ತೋರಬೇಕು."

ಇಬ್ಬರೂ ಒಳಬಂದು ವರಾಂಡದಲ್ಲಿ ಕುಳಿತನಂತರ ಅವನೆಂದ "ರತ್ನಾಬಾಯಿ ಇಲ್ಲವೆಂದರೆ ನಂಬುವುದೇ ಕಷ್ಟ. ಎಷ್ಟೊಂದು ಶ್ರದ್ಧಾವಂತ ವ್ಯಕ್ತಿ! ದೇವರು ನಿಜಕ್ಕೂ ನಿಷ್ಕರುಣಿ. ಅವರಿಗೆ ಖಂಡಿತ ಇಂಥ ದುರಂತ ಸಾವು

ಬರಬಾರದಿತ್ತು ; ಕೇಳಿ ನಿಜವಾಗಿಯೂ ನನಗೆ ಪ್ರಾಣಸಂಕಟವಾಯಿತು. ಎಲ್ಲಿ ಸಮಾಧಿ ಮಾಡಿದ್ದೀರಿ ? ಹೋಗಿ ಹೂವಿಟ್ಟು ಬರೋಣವೇ ?"

"ಇಂದಿಗೆ ಸರಿಯಾಗಿ ಒಂದು ತಿಂಗಳು. ನಾವು ಈಗಷ್ಟೆ ಸಮಾಧಿಯಿಂದ ಹಿಂದಿರುಗಿದೆವು. ಪರವಾಯಿಲ್ಲ ; ನಡೆ ಹೋಗಿ ಬರೋಣ."

ಅಷ್ಟರಲ್ಲಿ ಸುಮಿತ್ರ ಬಿಸಿ ಬಿಸಿ ಚಹದ ಟ್ರೇಯೊಡನೆ ಆಗಮಿಸಿದಳು. ಪರಸ್ಪರ–ಉಭಯ ಕುಶಲೋಪರಿಯ ನಂತರ ಚಹ ಸೇವಿಸಿ ಹೊರಟೆವು. ಅವನು ಜೀಪಿನಲ್ಲಿದ್ದ ಹಣ್ಣು ಹೂಗಳ ಬುಟ್ಟಿಯನ್ನು ತೆಗೆದುಕೊಳ್ಳುತ್ತ ಅಂದ "ಅವರ ಸಂಗೀತ–ದೈವಭಕ್ತಿ ಮರೆಯುವಂತಾದ್ದಲ್ಲ. ಅವರ ಸ್ನೇಹಪರತೆ–ಅತಿಥಿ ಸತ್ಕಾರ ಇನ್ನೂ ಹಸಿ ಹಸಿಯಾಗಿಯೇ ಮನದಲ್ಲಿ ಉಳಿದಿದೆ. ಓಹ್ ! ಮಾತೃಕಾಮಯಿ !"

ನಾನು ಮಾತಾಡದೆ ತಲೆದೂಗಿ ಸಮ್ಮತಿ ಸೂಚಿಸಿದೆ.

ಹಾದಿ ಸಾಗಿತು. ನಾವು ದಡದಡನೆ ಮೆಟ್ಟಲೇರುವಂತೆ ಏರುಮುಖವಾಗಿ ನಡೆದು ಸಮಾಧಿಗಳಿದ್ದ ಆ ತಾಣವನ್ನು ತಲ್ಪಿದೆವು. ಪುನರಪಿ ಪುಷ್ಪಾರ್ಪಣೆ ಮಾಡಿ ವಂದನೆ ಸಲ್ಲಿಸಿ ಸಮಾಧಿಯ ಅಂಗಣದಾಚೆಯಿದ್ದ ಹಸಿರು ಹುಲ್ಲಿನ ರನ್ನ ಗಂಬಳಿಯಲ್ಲಿ ಮಂಡಿಸಿ ಸುತ್ತಮುತ್ತಲಿನ ಪ್ರಕೃತಿ ಸೌಂದರ್ಯದ ಮೇಲೆ ದೃಷ್ಟಿಯನ್ನು ಹರಿಸಿದ ಅವನು ಮಂತ್ರಮುಗ್ಧನಂತಾದ. ಭಾವೋದ್ವೇಗದಿಂದ ಮುಖ ಬಿಂಬ ಕೆಂಪಡರಿತು.

"ನಿನ್ನ ಎಸ್ಟೇಟಿಗೆ ಎಷ್ಟು ಬಾರಿ ನಾನು ಬಂದಿಲ್ಲ ? ನೀನು ಒಂದು ಬಾರಿಯೂ ನನ್ನನ್ನಿಲ್ಲಿಗೆ ಕರೆತರಲಿಲ್ಲವಲ್ಲಾ ? ಎಂತಹ ಸುರಮ್ಯವಾದ ತಾಣ ಇದು ? ನಿನ್ನ ಬಂಗಲೆ ಇಲ್ಲಿ ಕಟ್ಟಿದ್ದಿದ್ದರೆ ತುಂಬಾ ಚೆನ್ನಾಗಿರುತಿತ್ತು."

"ನಿಜ....."

ಬಹಳ ಹೊತ್ತು ಅಲ್ಲಲ್ಲೇ ಅಡ್ಡಾಡಿ, ಸುತ್ತಮುತ್ತಣ ಪ್ರದೇಶದ ಮೇಲೆಲ್ಲಾ ದೃಷ್ಟಿ ಹಾಯಿಸಿ ಕಣ್ಮನಗಳು ತಣಿದ ನಂತರ ಮನೆಯ ಹಾದಿ ಹಿಡಿದಾಗ ಅವನೆಂದ "ರತ್ನಾಬಾಯಿ 'ಅಧರಂ ಮಧುರಂ ವದನಂ ಮಧುರಂ' ಸಂಗೀತ ಎಷ್ಟು ಮಧುರವಾಗಿ ಹಾಡುತಿದ್ದರು ಅಲ್ಲವೇ ?"

"ಹೌದು ಕೊನೆಕೊನೆಗೆ 'ನನಗೆ ವಿಷದ ಇಂಜಕ್ಷನ್ ಕೊಡಿಸಿ' ಎಂದು ಕೇಳುವಷ್ಟು ಬಳಲಿದ್ದರು, ಅಮ್ಮ. ಅಂತೂ, ಅವರ ದುರಂತ ಬಹಳ

ಸಂಕಟದಾಯಕ. Mercy Killing ತನಕ ನಾವು ಹೋಗಲಿಲ್ಲ. ಭಗವಂತನೇ ಕರೆದುಕೊಂಡ."

"ಪಾಪ.....ಬಹಳ ಅನ್ಯಾಯ."

"ಕೊನೆಗೂ ಸುಖಮರಣ ಲಭಿಸಲಿ ಎಂದು ಪ್ರಾರ್ಥಿಸಬಹುದಾದಂತಹ ಕರುಣಾಜನಕ ಸನ್ನಿವೇಶ."

"ನನಗೆ ತಿಳಿದುಬಂದಿದ್ದರೆ ನಾನು ಬಂದು ನೋಡುತಿದ್ದೆ. ನನಗೆ ದರ್ಶನ ಭಾಗ್ಯವಿರದೇ ಹೋಯಿತು."

ಅವನ ವಿಶಾದವಾಣಿ ನನ್ನ ಅಂತಸ್ಥಲವನ್ನು ಮುಟ್ಟಿತು. ನಾನವನಿಗೆ ಬರೆಯುದಿದ್ದುದು ನನ್ನ ತಪ್ಪು.

* * * *

ಬಂಗಲೆಯಿಂದ ಇಲ್ಲಿಗೆ ಸುಮಾರು ಎರಡು ಮೈಲಿ ಅಂತರ. ತೋಟದ ಒಳಾಂತರದಲ್ಲಿ ಹರಿದ ಕಾಲು ಹಾದಿ. ಎಲ್ಲಿಂದ ಎಲ್ಲಿಯುವರೆಗೂ ಟೀ ಗಿಡಗಳ ಸವಿಸ್ತಾರವಾದ ಹರವು. ಬೆಟ್ಟದ ತಪ್ಪಲನ್ನು ಇಳಿದನಂತರ ಥಾಂ ನದಿಯ ಅಂಚಿನ ಮೇಲೆ ಸ್ವಲ್ಪದೂರ ನಡೆಯಬೇಕು. ತೋಟದಂಚಿನಲ್ಲಿ ಹರಿಯುವ ನದಿ ಪ್ರಕೃತಿ ಸೌಂಧರ್ಯಕ್ಕೆ ಇನ್ನಿಷ್ಟು ಇಂಬು. ನಾವು ನದಿಗಿಳಿದು ಕೈ ಕಾಲು ಮುಖ ಮಜ್ಜನ ಮಾಡಿ, ಮನೆ ಸೇರಿದಾಗ ಸೂರ್ಯ ನಡುನೆತ್ತಿಯನ್ನೇರಿದ್ದ. ಒಳಬಂದಾಗ ಮೇಜಿನ ಮೇಲೆ ಊಟ ಅಣಿಯಾಗಿತ್ತು. ಸುಮಿತ್ರ ನಮಗಾಗಿ ಕಾದಿದ್ದಳು. ನರಹರಿಯನ್ನು ಅಮ್ಮನ ಕೊಠಡಿಗೆ ಕರೆದೊಯ್ದೆ. ಬರಿದಾದ ಮಂಚದ ಬಳಿ ಸಣ್ಣ ಸ್ಟೂಲಿನ ಮೇಲೆ ದೀಪವರ್ತಿಕೆ ಉರಿಯುತಿತ್ತು, ಕುಡಿಕಟ್ಟಿ. ಊದುಬತ್ತಿ ಉರಿದು ಹೋಗಿತ್ತು. ತಲೆದೆಸೆಯಲ್ಲಿ ಅವರದೊಂದು ಚಿತ್ರಪಟ. ಅದಕ್ಕೊಂದು ಗುಲಾಬಿ ಹೂ. ನರಹರಿ ತಲೆಬಾಗಿ ಕೈಜೋಡಿಸಿ ಮೌನವಾಗಿ ಗೌರವ ಅರ್ಪಿಸಿದ.

ಅನಂತರ ಬಹಳ ಸಿಂಪಲ್ ಊಟ. ನರಹರಿಗೆ ವಿಶ್ರಾಂತಿ ತೆಗೆದುಕೊಳ್ಳಲು ಹೇಳಿ ಲೆಕ್ಕದ ಪುಸ್ತಕ ತೆಗೆದುಕೊಂಡೆ. ಕೇವಲ ಕೆಲವು ನಿಮಿಷಗಳು ಉರುಳಿರಲಿಕ್ಕಿಲ್ಲ. ಪ್ರಾಂಗಣದಲ್ಲಿ ತನ್ಯಾ ಯಾರೊಂದಿಗೋ ಮಾತಾಡುತಿದ್ದುದು ಕೇಳಿಸಿತು. ಈ ಅವೇಳೆಯಲ್ಲಿ ಯಾರಿರಬಹುದು ಎಂದು ಕಿವಿಗಳು ನಿಮಿರಿ ಮನಃಬುದ್ಧಿಗಳು ವಿಚಾರಶೀಲವಾದುವು. ದನಿಯಿಂದ

ಯಾರೆಂಬುದನ್ನು ಗುರುತು ಹಿಡಿಯಲಾಗಲಿಲ್ಲ. ಸ್ವಲ್ಪೇ ಹೊತ್ತಿನೊಳಗಾಗಿ ತನ್ಯಾ ಒಳಬಂದು ಆಗಂತುಕನ ವಿಷಯವನ್ನು ವಿನಂತಿಸಿಕೊಂಡು ನನಗೆ ಕರೆ ನೀಡಿದ.

ಈ ಅವೇಳೆಯಲ್ಲಿ ಬಂದುದು ಸರಿಯೆನಿಸಲಿಲ್ಲ ನನಗೆ. ಹೊರಹೋಗಿ ನೋಡಿದೆ. ಆತ ಜನಸೇವಾಸಂಘದ ಸದಸ್ಯನಾಗಿದ್ದ. ಕೈಯಲ್ಲೊಂದು ಲಕೋಟೆಯಿತ್ತು.

"ಏನಪ್ಪಾ, ರವಿ ?"

ಅವನು ಕಾಗದವನ್ನು ನನ್ನ ಕೈಗಿಟ್ಟು "ನೋಡಿ ಸರ್! ಅವಧಿಗಿಂತ ಒಂದು ವಾರಕ್ಕೆ ಮುಂಚಿತವಾಗಿ ಸಭೆ ಕರೆಯಲಾಗಿದೆ. ಕೆಲವು ದಿನಗಳ ಮೊದಲೇ ಕೊಡಬೇಕಾದ 'ನೋಟೀಸ್' ಕೂಡಾ ಇಲ್ಲ. ಇದು ನ್ಯಾಯ ಬಾಹಿರವಾದುದು. ಇದರಿಂದ ಅನೇಕರಿಗೆ ಅಡಚಣೆ; ಸ್ವಂತ ಕೆಲಸಕಾರ್ಯಗಳಿಗೆ ಧಕ್ಕೆ!"

ಅವನ ದನಿಯಲ್ಲಿ ಅಸಮಾಧಾನ ಅಶಾಂತಿಗಳ ಝುರಿ ಜರ್ರನೆ ಹರಿದು ಬಂತು.

ನಾನು ಕಾಗದವನ್ನು ತಿರುಗಿಸಿ ನೋಡಿ ನುಡಿದೆ "ನಿಮ್ಮ ವಾದವೇನೋ ಸರಿ. ಕೆಲವು ಅನಿವಾರ್ಯ ಸಂದರ್ಭಗಳಲ್ಲಿ ಸ್ವಲ್ಪ ಹಿಂಚು ಮುಂಚಾಗಿ ಸಭೆ ಕರೆಯುವ ಹಕ್ಕಿದೆ. ಐದನೆಯ ನಿಯಮ ನೋಡಿ!"

ಅದು ತುರ್ತು ಪರಿಸ್ಥಿತಿಯಲ್ಲಿ ಮಾತ್ರ. ಈಗ ಅಂತಹ ವಿಪರೀತವೇನೋ ಇಲ್ಲವಲ್ಲಾ ?"

"ಸ್ವಲ್ಪ ಸಮಾಧಾನ ಹೊಂದು. ಅಶಾಂತಿ–ಅಸಮಾಧಾನಗಳಿಂದ ಏನೇನೂ ಆಗಲಾರದು."

ಅವನು ಅಷ್ಟು ಸುಲಭದಲ್ಲಿ ಪಟ್ಟು ಬಿಟ್ಟು ಕೊಡಲು ತಯಾರಿರಲಿಲ್ಲ. ಮಾತಿಗೆ ಮಾತು ಪ್ರಶ್ನೆಗಳ ಮೇಲೆ ಪ್ರಶ್ನೆ. ಕೊನೆಗೂ ಅವನನ್ನು ಒಪ್ಪಿಸಬೇಕಾದರೆ ಗಂಟಲು ಹರಿದುಕೊಳ್ಳಬೇಕಾಯ್ತು. ಸಭೆ ಕಾನೂನು ಬಾಹಿರವಲ್ಲ ಎಂಬುದು ಮನದಟ್ಟಾದ ಮೇಲೆ ಅವನು ಮೆಟ್ಟಿಲಿಳಿದ.

ಮಧ್ಯಾಹ್ನ ಒಂದೂವರೆಯ ಹೊತ್ತಿಗೆ ಮನೆಗೆ ಬಂದು ಸನ್ನ ಕೆಲಸ ಮತ್ತು ವಿಶ್ರಾಂತಿ ಎರಡನ್ನೂ ಹಾಳುಮಾಡಿದ ಬಗೆ ಅವನ ತಲೆಗೆ ಹೊಕ್ಕಿರದುದು ಆಶ್ಚರ್ಯ. ನಾನು ಆ ವಿಚಾರವಾಗಿ ಸೊಲ್ಲೆತ್ತಲಿಲ್ಲ ಕೂಡ.

* * * *

ನರಹರಿ ಎದ್ದು ಬಂದಾಗ ಮಧ್ಯಾಹ್ನ ಮೂರು ಗಂಟೆ.

ಅವನು ಕೈಯ್ಯಲ್ಲಿದ್ದ ಪುಸ್ತಕವನ್ನು ಮೇಜಿನಮೇಲಿಟ್ಟು "ನನಗೆ ಪುಸ್ತಕ ಪಠಣ ಸಾಧ್ಯವಾಗಲಿಲ್ಲ. ಇಂದು ಏನೋ ಒಂದು ರೀತಿಯಲ್ಲಿ ಖಾಲಿಮನೆಗೆ ಬಂದಂತಾಗಿದೆ. ಇಲ್ಲಿ ಖಂಡಿತ ಮನಃಶ್ಯಾಂತಿ ಪಡೆಯಲಾಗಲಿಲ್ಲ ಕಣಯ್ಯಾ." ಎಂದ, ಮೈ ಕೈ ಮುರಿಯುತ್ತ.

"ದಟ್ಟಪುಷ್ಟವಾದ ರೋಮರಾಜಿಯಿಂದ ಕೂಡಿದ ಎರಡೂ ಕೈಗಳನ್ನು ಕತ್ತಿನ ಹಿಂದೆ ಬೆರಳಿಗೆ ಬೆರಳನ್ನು ಹೆಣೆದುಕಟ್ಟಿದ್ದ.

"ನೀನೇ ಹಾಗೆಂದರೆ ನನಗೆ ಹೇಗಿರಬೇಡ ಹೇಳು ?"

"ತೀರಾ ದುರದೃಷ್ಟ."

"ಇದಂತೂ ಬಿಡು; ಸಂಸಾರಿಕವಾದುದು. ಇಂದು ಜಗತ್ತಿನಲ್ಲಿ ಒಂದಲ್ಲ ಒಂದು ರೀತಿಯ ಅಶಾಂತಿ ಹಿರಿದು ತಿನ್ನುತ್ತಿದೆ ಎನಿಸುತ್ತಿದೆ ನನಗೆ. ನೋಡು! ಆ ತಮ್ಮ ಎಷ್ಟು ಸಣ್ಣ ಕಾರಣಕ್ಕಾಗಿ ಸಿಡಿದೆದ್ದ....? ಇಂಥ ಸಣ್ಣ ಸಣ್ಣ ವಿಚಾರಗಳಲ್ಲೂ ಅಶಾಂತಿ ಮಹತ್ವ ಪಡೆಯುತ್ತದೆ. ಇವೆಲ್ಲಾ ಇತ್ತೀಚಿನ ದಿನಗಳಲ್ಲಿ ತುಂಬಾ ಹೆಚ್ಚು ; ಇದಕ್ಕೇನ್ನೆನ್ನುತ್ತೀ ?"

ನರಹರಿ ಸ್ವಲ್ಪಹೊತ್ತು ಗಂಭೀರವಾಗಿ ಯೋಚಿಸುತಿದ್ದು ಅನಂತರ ನುಡಿದ "ಅದು ಅವರವರ ಜಾಯಮಾನ. ವಿನಾಕಾರಣ ಚಿಂತೆ ಹಚ್ಚಿಕೊಳ್ಳುವುದು ಕೆಲವರ ಸ್ವಭಾವ. ಬಹುತೇಕವಾಗಿ ದುರ್ಬಲ ಮನಸ್ಸಿನ ವ್ಯಾಪಾರ ಅಶಾಂತಿ. ಮನಸ್ಸು ದೃಢವಾದರೆ ಅಶಾಂತಿಯೂ ಇಲ್ಲ; ಅಸಮಾಧಾನವೂ ಇಲ್ಲ."

"ಜನಸೇವಾ ಸಂಘ ಮಾಡುತ್ತಿರುವುದು ಸ್ತುತ್ಯಕಾರ್ಯ. ಅದರ ಸದಸ್ಯರೆಲ್ಲರೂ ಅದರ ಪ್ರತಿಯೊಂದು ನಿಯಮಾವಳಿಗೂ ಆಬದ್ಧರಾಗಿದ್ದಾರೆ. ಅಂದರೆ, ಇಲ್ಲಿಗೆ ಬಂದ ಸೋದರನೂ ಸಹ. ಅಂದಮೇಲೆ, ಇಲ್ಲಿ ಇರಬೇಕಾದುದು ಶಾಂತಿ ಸಮಾಧಾನಗಳೇ ವಿನಾ ಅಶಾಂತಿಯಲ್ಲ. ಇದೇನೋ ವಿಚಿತ್ರ.

ನನಗೂ ಅಷ್ಟೆ: ಕೈತುಂಬಾ ಕೆಲಸ. ಮನಸ್ಸಿಗೆ ಶಾಂತಿಯಿಲ್ಲ. ಒಟ್ಟನಲ್ಲಿ ನಮ್ಮನಮ್ಮ ಮನಃಸಂವೇದನೆಗೆ ನಾವು ಅಸಮರ್ಥರಾಗಿರುವುದು ಒಂದು ಕಾರಣವಿರಬಹುದೇನೋ........."

"ಹತ್ತೂ ಜನರ ವಿಚಾರ ಒತ್ತಟ್ಟಿಗಿರಲಿ; ಈಗ ನೀನು ತಿದ್ದಿಕೊಳ್ಳು ಬೇಕಾದುದು ನಿನ್ನನ್ನೇ. ಈ ಲೋಕಕ್ಕೆ ಬರುವಾಗ ನಾವೇನೂ ತರಲಿಲ್ಲ. ಹೋಗುವಾಗ ಏನೂ ಒಯ್ಯುವುದಿಲ್ಲ. ಮತ್ತೇಕೆ ಚಿಂತೆ ?"

"ನನಗೂ ಇದು ಬಿಡಿಸಲಾಗದ ಸಮಸ್ಯೆ. ಅಶಾಂತಿ ಸಾಂಸಾರಿಕವೂ ಅಲ್ಲ; ಆತ್ಮಿಕವೂ ಅಲ್ಲ. ಇದೊಂದು ವಿಶೇಷವೇ."

"Little things affect little minds. ಆದರೆ, ನಿನ್ನದು ಹಾಗಲ್ಲ. ನಿನ್ನಂತಹವನು ಆತ್ಮಶೋಧನೆಯಿಂದಲೇ ಅರಿತುಕೊಳ್ಳಬೇಕು. ನೀನು ಏನು ಬೇಕಾದರೂ ಶೋಧಿಸಬಲ್ಲೆ. ಯಾವ ಚಿಂತೆ ಅಥವಾ ಅಶಾಂತಿ ಮೂಡಲಿ, ಅತ್ತ ದೂಡಿದರಾಯಿತು. ಕಲಿತವರಿಗೆ ಇದೇನು ಹೆಚ್ಚಲ್ಲ....."

"ಅದೂ ನನಗೂ ಗೊತ್ತು.....ನಾನೆಂದಿಗೂ ಚಿಂತೆಯನ್ನು ಹಚ್ಚಿಕೊಳ್ಳುವವನಲ್ಲ. ನನ್ನ ಅಶಾಂತಿ ಬಹುಶಃ ದೈವೀಕವಾಗಿರಬಹುದು....."

ನರಹರಿ ನಕ್ಕು ಬಿಟ್ಟ.

ನಾನೂ ನಗುತ್ತ ಅಂದೆ "ನಾಂಭೋಧಿ ತೃಷ್ಣಾ ಮಪೋಹತಿ.... ನಾನೀಗ ಹೇಳುತ್ತಿರುವುದು ಲೋಕ ವ್ಯವಹಾರವನ್ನು ಕುರಿತು. ಇದರಿಂದ ಎಂದಾದರೂ ನಮಗೆ ಶಾಂತಿ ಲಭಿಸೀತೇ!"

"ನೋಡೋಣ ಕಾಲಕ್ರಮದಲ್ಲಿ ಯಾವಯಾವ ಪರಿವರ್ತನೆಯಾಗುತ್ತೋ.....ಇಂದು ನಿಗೂಢ, ಮುಂದೆ ಬಯಲು."

ನಾನು ತಲೆದೂಗಿ ಸಮ್ಮತಿ ಸೂಚಿಸಿದೆ.

* * * *

ಪೂರ್ವದಿಗ್ದೇಶದಲ್ಲಿ ಬಾಲಕೋಮಲ ರವಿಯ ಉತ್ಥಾನ.

ಪಕ್ಷಿಗೊರಳ ಸುಪ್ರಭಾತದ ಮೃದು ಮಧುರ ರಾಗ ಮಾಲೆಯ ಮನ ಮೋಹನಧಾರೆ.

ನಾನು ಗೆಳೆಯನೊಂದಿಗೆ ತೋಟದ ಒಳಾಂತರದಲ್ಲಿ ವಾಯುಸೇವನೆಗೆ ಹೊರಟೆ. ಪಚ್ಚವಾರ್ಧಿಯ ಮನಮೋಹಕ ಸಾಮ್ರಾಜ್ಯದಲ್ಲಿ ಸಾನಂದದಿಂದ ಸಾಗಿತು ಹಾದಿ.

"ನರಹರಿ! ಈ ಎಸ್ಟೇಟ್–ಈ ವಾತಾವರಣ ಯಾವತ್ತೂ ಶಾಂತಿ ಪ್ರದಾಯಕವೇ, ಆದರೆ....." ನಾನು ಅಷ್ಟಕ್ಕೆ ಉಗುಳು ನುಂಗಿ ಸುಮ್ಮನಾದೆ.

"ಅದೇಕೆ ಅರ್ಧ ಮಾತು....?"

"ಈ ಶಾಂತಿ ಸಾಮ್ರಾಜ್ಯದಿಂದ ನಾನು ಜಗತ್ತಿನೆಡೆಗೆ ಪಕ್ಷಿನೋಟ ಬೀರುವುದರಿಂದಲೇ ಮನಸ್ಸಿಗೆ ಒಂದು ಬಗೆಯ ವಿಚಿತ್ರ ಅಶಾಂತಿ? ಜಗತ್ತು ಯಾವತ್ತೂ ಹೀಗೇಕಿರಬಾರದು ಎಂಬ ಪ್ರಶ್ನೆ ಏಳುತ್ತಲೇ ಇರುತ್ತದೆ. ಅದಕ್ಕೆ ಪರಿಹಾರ ಕಂಡುಕೊಳ್ಳುವುದು ಕಷ್ಟ."

ಅವನು ಯೋಚನಾಕ್ರಾಂತನಾದ. ನಾನು ಮುಂದುವರಿದೆ,

"ಜಗತ್ ಶಾಂತಿ ಇರುವುದು ವಿಜ್ಞಾನ ಪರಿಣತರ ಕೈಯಲ್ಲಿ. ಹಿರಿಯ ರಾಷ್ಟ್ರಗಳ ನಾಯಕ ಮಂಡಲಿ ದಯಾವಂತರಾದರೆ ಜಗತ್ ಶಾಂತಿಗೇನು ಕೊರತೆ? ಕೊಬ್ಬಿದ ರಕ್ತಕ್ಕೆ ದೀನದಲಿತರ ಸಂಕಷ್ಟ ಅರ್ಥವಾಗುವುದುಂಟೇ? ರಣ ಪಂಡಿತರು ಅಧಿಕಾರ ಛಲಾಯಿಸುತ್ತಾರೆಯೇ ಹೊರತು ರಣರಂಗದಲ್ಲಿ ಸಾವು ನೋವನ್ನು ಎದುರಿಸುತ್ತಾರೆಯೇ? ಇದೆಲ್ಲಾ ಮೆತ್ತನೆಯ ಕುರ್ಚಿಗಳ ನಿರ್ಣಯ. ಇಲ್ಲಿ ಕೇಳು, ೧೯೬೮ರಲ್ಲಿ ಅಮೆರಿಕ ಮತ್ತು ರಷ್ಯ ನಡೆಸಿದ ಅಣ್ವಸ್ತ್ರ ಪರೀಕ್ಷೆಗಳು ಅದರ ಹಿಂದಿನ ವರ್ಷಗಳಲ್ಲಿ ನಡೆಸಿದುದಕ್ಕಿಂತ ಹೆಚ್ಚು ಮಾರಕ ಎಂದು ಸ್ವೀಡನ್ನಿನ ತಜ್ಞರು ತಿಳಿಸಿದ್ದಾರೆ. ಭೂಮಿಯೊಳಗೆ ಕಳೆದ ವರ್ಷ ನಡೆಸಿದ ಪರೀಕ್ಷೆಗಳ ಸಂಖ್ಯೆ ಐವತ್ತಕ್ಕೂ ಹೆಚ್ಚು. ಇದರಲ್ಲಿ ಅಮೆರಿಕ ನಡೆಸಿದ್ದು ಹದಿನಾರು. ರಷ್ಯ ನಡೆಸಿದ್ದು ಇಪ್ಪತ್ತೇಳು. ಚೀನಾ ಎರಡು. ಬ್ರಿಟನ್ ಮತ್ತು ಫ್ರಾನ್ಸ್ ತಲಾ ಒಂದು ಹೀಗಿದೆ ಹಿರಿಯ ರಾಷ್ಟ್ರಗಳ ರಣಪಾಂಡಿತ್ಯ.

"ಮೇಲಾಗಿ, ಇಂದಿನ ಸಮಾಜಕ್ಕೆ ಸಿನಿಮಾ ಮಾಧ್ಯಮಗಳಿಂದ, ಕೀಳು ಸಾಹಿತ್ಯ ಮಾಧ್ಯಮದಿಂದ ಕಲಿಸಲ್ಪಡುವ ಪರಿಪಾಟ ಕೊಲೆ–ಸುಲಿಗೆ–ಮೋಸ–ಹೊಡೆದಾಟ–ಅನೀತಿ–ಅನ್ಯಾಯ! ಇವುಗಳು ಚಿತ್ರವತ್ತಾಗಿರುವುದಂತೂ ಅತ್ಯಂತ ವಿಷಾದಕರ. ಇಂದು ಕಲಿತವರೂ ಕಲಿಯದವರೂ ಕಣ್ಣು ಕಟ್ಟಿದ ಕುದುರೆಗಳಂತೆ ಒಂದೇ ನೇರಕ್ಕೆ ಓಡುತ್ತಿರುವುದು ಸಹ ದುರದೃಷ್ಟಕರ. ಮೇಲ್ಪಂಕ್ತಿ ಹೀಗಿರುವಾಗ ಮುಗ್ಧ ಜನಾಂಗ ಕಲಿಯ ಬೇಕಾದುದು ಇದನ್ನೇ! ಸಿನಿಮಾಯ ಚಿತ್ರಾನುಕರಣೆ ಎಷ್ಟೆಷ್ಟು ಕಡೆ ನಡೆದಿಲ್ಲ? ಕೊಲೆ–ಸುಲಿಗೆಗಳಿಗೆ ಚಲನಚಿತ್ರಗಳೇ ಮಾದರಿಯಲ್ಲವೇ ? ಇದನ್ನೆಲ್ಲಾ ಸರಿಪಡಿಸ

ಬೇಕಾದವರೇ ಪ್ರೋತ್ಸಾಹ ಕೊಡುವುದಾದರೆ ಹೇಗೆ? ಈ ದಿಶೆಯಲ್ಲಿ ಸತ್ಪರಿಣಾಮಕಾರಿಯಾದ ಕ್ರಾಂತಿ ನಡೆಯದಿದ್ದರೆ ಕಷ್ಟ."

"ಇದನ್ನು ಅಕ್ಷರಶಃ ಒಪ್ಪಲೇ ಬೇಕು. ಒಪ್ಪಿಕೊಳ್ಳುವೆ. ಈ ವಿಚಾರವಾಗಿ ನಾನೂ ಆಳವಾಗಿ ಯೋಚಿಸಿರುವೆ. ಈ ಕೊಬ್ಬಿದ ಜನಾಂಗಕ್ಕೆ ನೀತಿ ಭೋದೆ ಗಾಂಧಿ ಇಜಂ-ನಲ್ಲಾಗಲೀ ಸೋಶಿಯಲಿಜಂ-ನಲ್ಲಾಗಲೀ ಕಲಿಸುವುದು ಅಸಾಧ್ಯ. ಅಂದಮೇಲೆ, ಮಾನವೀಯತೆಯ ಪರಿಪಾಕ ಪ್ರೇಮದ ಮೂಲಕವೇ ಆಗಬೇಕು. ಸತ್ಯ-ಧರ್ಮಗಳಿಗೆ ಪ್ರೇಮವೇ ತಳಹದಿ. ಈ ಪ್ರೇಮಾಂಕುರದ ಪರಿಪಾಕ ಸಿನೆಮಾ ಮತ್ತು ಟಿ.ವಿ. ಗಳ ಮೂಲಕವೇ ಆಗಬೇಕು. ಇದನ್ನು ಹಿರಿಯ ಮುತ್ಸದ್ದಿಗಳು ಅರಿತುಕೊಳ್ಳದೇ ಹೋದರೆ ಕಾಲಾನುಕಾಲಕ್ಕೂ ಅಶಾಂತಿ ಇದ್ದದ್ದೇ."

"ಹೌದು, ಕಣಯ್ಯಾ! ಹೌದು."

ನನ್ನ ಮನಃಕಲ್ಪದಲ್ಲಿ ಅಶಾಂತಿಯ ಕೀಟ ಕೊರೆಯುತ್ತಿತ್ತು ಗುಂಗೆಯ ಹುಳದಂತೆ; ನಾನು ಆಲೋಚನಾಶೀಲನಾದೆ.

ಮರುದಿನ ನರಹರಿ ಹೊರಡುವ ಮುನ್ನ ಒಂದು ಟೇಪ್ ರೆಕಾರ್ಡರನ್ನು ನನ್ನ ಕೈಗಿಟ್ಟು ಅಂದ.

"ನನಗೆ ಬೆಳಗಿನ ಪಕ್ಷಿ ಸಮೂಹದ ಉದಯರಾಗ ಬೇಕಾಗಿದೆ. ಇಲ್ಲಿ ಬಹಳ ಪಕ್ಷಿಗಳಿವೆ. ಮೊನ್ನೆ ಸಮಾಧಿಯ ಬಳಿಯಂತೂ ವಿವಿಧ ಜಾತಿಯ ಪಕ್ಷಿಗಳ ಕೊರಳದನಿ ಕೇಳಿಸಿಕೊಂಡೆ ನನಗದು ಮರತೇಹೋಗಿತ್ತು! ನಿನ್ನೊಂದಿಗೆ ಮಾತುಕತೆಯ ಮೋಜಿನಲ್ಲಿ ನೆನಪಾಗುವುದಾದರೂ ಹೇಗೆ? ನೆನಪಾಗಿದ್ದಿದ್ದರೆ ನಿನ್ನೆಯೋ ಇಂದೋ ನಾನೇ ಮಾಡಿಕೊಳ್ಳಬಹುದಾಗಿತ್ತು. ನೀನು ಎಂದಾದರೂ ಸಮಾಧಿಯ ಕಡೆ ಹೋಗುವುದಾದರೆ ಈ ಟೇಪ್ ರೆಕಾರ್ಡರನ್ನೂ ತೆಗೆದುಕೊಂಡು ಹೋಗು. ಇದರಲ್ಲಿರುವುದು ಖಾಲಿ ಟೇಪ್."

"ಆಗಲಿ, ವಾಯುವಿಹಾರಕ್ಕೆ ಆ ಕಡೆಯೇ ಹೋದರಾಯ್ತಲ್ಲ."

"ಸರಿ....ಸರಿ."

ಅವನ ಟೇಪ್ ರೆಕಾರ್ಡರನ್ನು ತೆಗೆದುಕೊಂಡು ಮೇಜಿನ ಮೇಲಿಟ್ಟು, ನಾನು ಸುಮಿತ್ರೆಯೊಂದಿಗೆ ಗೆಳೆಯನನ್ನು ಆತ್ಮೀಯತೆಯಿಂದ ಬೀಳ್ಕೊಟ್ಟೆ.

* * * *

ಬೆಳಗಿನ ಪತ್ರಿಕಾವಲೋಕನದಲ್ಲಿ ಮನವಿಟ್ಟೆ. ಮುಖಪುಟವನ್ನು ಓದಿದನಂತರ ಒಳಪುಟವನ್ನು ತೆರೆದೆ. ಅದರಲ್ಲೊಂದು ಚಿತ್ರಸಹಿತ ಸೋಜಿಗದ ಸುದ್ದಿ! ಬೃಹದ್ ಬೇವಿನ ಮರದಲ್ಲಿ ಹಾಲಿನಂತಹ ದ್ರವ ದ್ರವಿಸುತ್ತಿದೆ. ಹಾಲು ಸಕ್ಕರೆ ಸೇರಿಸಿದಂತಹ ಸವಿಯಾದ ಅಮೃತಧಾರೆ! ಜನ ಅದರ ತನಿರಸಕ್ಕಾಗಿ ಕ್ಯೂ ನಿಲ್ಲುತಿದ್ದಾರೆ. ವಿಶೇಶ ಪೂಜೆ ನಡೆಯುತ್ತಿದೆ. ಅನೇಕ ವಿಜ್ಞಾನಿಗಳು ಅದರ ರಹಸ್ಯವನ್ನು ಭೇದಿಸಲು ಅತ್ತ ಧಾವಿಸಿದ್ದಾರೆ. ಆದರೇನು? ಅವರಿಂದ ರಹಸ್ಯಭೇದ ಸಾಧ್ಯವಾಗಿಲ್ಲ. ಸುದ್ದಿಯ ಪೂರ್ತಿ ವಿವರಣೆ ಅರ್ಧ ಪುಟವನ್ನು ವ್ಯಾಪಿಸಿತ್ತು. ಆ ಚಿತ್ರವನ್ನು ಗಮನವಿಟ್ಟು ನೋಡಿದೆ. ಅಮೃತಧಾರೆಯ ಚಿತ್ರ ಸ್ಪಷ್ಟವಾಗಿ ಮೂಡಿದೆ. ಈ ಸೃಷ್ಟಿ ವೈಚಿತ್ರ ಎಷ್ಟು ನಿಗೂಢ?

ನಾನು ಆಲೋಚನಾಪರವಶನಾದೆ. ತಲೆಯಲ್ಲಿ ಅದೇ ವಿಚಾರ ವಿಪ್ಲವಧಾರೆ.... ಆ ಮರದಲ್ಲಿ ಏನೇ ಸುರಿಯಲಿ ಈ ಜನ ಏಕೆ ಹೀಗೆ ಮರುಳಾಗುತ್ತಾರೆ? ಹುಚ್ಚುಚ್ಚಾಗಿ ಅದಕ್ಕೆ ಪೂಜೆ ಪುರಸ್ಕಾರ ಎಂದರೇನು? ವಿಚಾರದಲ್ಲಿ ಕ್ರಾಂತಿಯಾಗದೆ ಆಚಾರದಲ್ಲಿ ಕ್ರಾಂತಿ ಖಂಡಿತ ಅಸಂಭವ. ಆಚಾರದಲ್ಲಿ ಕ್ರಾಂತಿಯಾಗದೆ ಸಮಾಜದಲ್ಲಿ ಕ್ರಾಂತಿ ಎಂದಿಗೂ ಅಸಾಧ್ಯ. ನಮ್ಮಲ್ಲಿ ವಿದ್ಯಾವಂತರೂ, ಯೋಚಿಸಬಲ್ಲವರೂ ವಿಚಾರಶೀಲರಾಗಿ ಹೊಸಮೌಲ್ಯಗಳನ್ನು ಜೀವನಕ್ಕೆ ಅಳವಡಿಸಿ ಮೆರುಗು ಕೊಡುವ ಉತ್ಕ್ರಾಂತಿಭಾವವನ್ನು ಬದಿಗಿಟ್ಟಿರುವುದೇ ಸಮಾಜೋನ್ನತಿಯ ಹಾದಿಗೆ ಮುಳ್ಳು. ವ್ಯಷ್ಟಿ ವಿಕಾಸ ಸಮಷ್ಟಿ ವಿಕಾಸಕ್ಕೆ ನಾಂದಿ. ಹೊಸ ಸಮಾಜ ಸೃಷ್ಟಿಗೆ ಹೊಸ ಮೌಲ್ಯ ಮಾಪಕರು ಮುಂದೆ ನಿಲ್ಲದೆ ಹೋದರೆ ಆಗುವುದಿಷ್ಟೆ....

ಸ್ವಲ್ಪಹೊತ್ತು ವಿಚಾರಕ್ರಾಂತಿಯಲ್ಲಿ ನಿಮಗ್ನನಾಗಿದ್ದೆ. ಮನಸ್ಸು ನಲುಗುವಷ್ಟು ವಿಚಾರವಿಪ್ಲವ. ಹೊತ್ತು ಸದ್ದು-ಗದ್ದಲಗಳಿಲ್ಲದೆ ನಿರಾತಂಕವಾಗಿ ಉರುಳಿಹೋಯಿತು. ಅನಂತರ ಪತ್ರಿಕೆಯ ಪುಟಪುಟಗಳ ಮೇಲೆ ಕಣ್ಣಾಡಿಸಿದೆ. ಕೊಲೆ–ಸುಲಿಗೆ–ಅಪಘಾತ–ಹೊಡೆದಾಟ–ಮತೀಯ ಗಲಭೆ ಮುಂತಾದ ಅತ್ಯಂತ ಕ್ರೂರ ಅನಾಗರಿಕ ವಿಚಾರಗಳಿಗೆ ಲೆಕ್ಕವೇ ಇಲ್ಲ. ಸ್ವಾತಂತ್ರ್ಯಾನಂತರ ನಮ್ಮವರು ಸರ್ವತೋಮುಖವಾದ ಸಂಪದಭಿವೃದ್ಧಿಗೆ ಗಮನಕೊಡಬೇಕಾದುದು ನ್ಯಾಯ.

This world is a comedy to those that think,
a tragedy to those that feel.

—Horace Walpole

ಪಾಶ್ಚಾತ್ಯ ದ್ರಷ್ಟಾರನ ನುಡಿಗಟ್ಟು ಚಿತ್ತಭಿತ್ತಿಯಲ್ಲಿ ಸುಳಿದಳಿಯಿತು. ಈ ವಿಚಾರಹೀನ ಜನ ಸಂಪತ್ತಿಯು ಗಮ್ಯಸ್ಥಾನ ಯಾವ ದಿಕ್ಕಿನಲ್ಲಿದೆಯೋ, ಮುನ್ನಡೆ ಎಲ್ಲಿಯವರೆಗೆ ಸಾಗುತ್ತದೋ ಅದೇ ಅರ್ಥವಾಗುತ್ತಿಲ್ಲ....

ತನ್ಯಾ ದಡದಡನೆ ಓಡಿ ಬಂದು "ಜೀಯಾ! ದೇವರ ಮನೆಯಲ್ಲಿ ನಾಗರಹಾವು!" ಎಂದ.

"ನಿಜವಾಗಿ....?"

"ಹೌದು! ಬಂದು ನೋಡಿ!"

ನಾನು ಅವನ ಹಿಂದೆಯೇ ಧಾವಿಸಿದೆ. ಅವನು ಬಾಗಿಲು ಮುಚ್ಚಿ ಚಿಲಕ ಹಾಕಿ ಬಂದಿದ್ದ. ಕಿಟಕಿಯಲ್ಲಿ ಮೊಗವಿಟ್ಟು ಹಣಕಿ ನೋಡುತ್ತ ತೋರಿಸಿದ "ಅದೋ ನೋಡಿ!"

ನೋಡಿದೆ, ನೋಡಿದೆ!

ನೆಲದ ಮೇಲೆ ಸುರುಳಿ ಸುತ್ತಿ ಮಂಗಳ ದ್ರವ್ಯಗಳನಿಟ್ಟಿದ್ದ ಸಣ್ಣ ಕಾಲು ಮಣೆಯ ಮೇಲೆ ಬಿಚ್ಚಿದ ಹೆಡೆಯನ್ನಿಟ್ಟು ಆರಾಮವಾಗಿ ಮಲಗಿದೆ! ಸುನೀಲ ಮಣಿಗಳಂತೆ ಮಿಂಚುವ ಕಣ್ಣುಗಳು, ಗೋಧಿಯ ಬಣ್ಣ, ಬಿಚ್ಚಿದ ಹೆಡೆ, ಮಲಗಿದ ರೀತಿ ಬಲು ಸುಂದರ! ಅದನ್ನು ಹೊಡೆಯಬೇಕೆ? ಬಿಡಬೇಕೆ? ಎಂಬ ಪ್ರಶ್ನೆ ಮನದಲ್ಲಿ.

"ಇದು ಈ ಹಿಂದೆಯೂ ಈ ಬಾಗಿಲ ಬಳಿ ಎರಡು ಬಾರಿ ಕಂಡಿತ್ತು. ಹೊಡೆಯಬೇಕೆನ್ನುವಷ್ಟರಲ್ಲಿ ಅದು ಎಲ್ಲಿಯೋ ಬಿಲ ಸೇರಿರುತಿತ್ತು. ಇದೇ ಮೊದಲು ದೇವರ ಮನೆಯೊಳಗೆ ಬಂದಿರುವುದು. ಈದಿನ ಬಾಗಿಲು ಮುಚ್ಚಿರಲಿಲ್ಲ. ಒಳಗಡೆ ಸೇರಿ ಬಿಟ್ಟಿದೆ!"

"ದೇವರ ಮನೆಗೆ ಬಂದ ಅದನ್ನು ಹೊಡೆಯದೆ ಹೊರಗೆ ಕಳುಹಿಸೋಣ."

ಅದು ನಮ್ಮ ಮಾತಿನ ಗದ್ದಲ ಕೇಳಿ ತಲೆಯೆತ್ತಿ ಹೆಡೆಯನ್ನು ಆಡಿಸಿತು. ಕೊಠಡಿ ಚಿಕ್ಕದು; ಒಳಹೋಗಿ ಹೊರಗಟ್ಟುವುದು ಕಷ್ಟವೇ.

ಒಂದು ಗಳಿಗೆ ಯೋಚಿಸಿ ನಾನೆಂದೆ "ಬಾಗಿಲು ತೆರೆದಿಟ್ಟು ಒಂದು ಬಿದಿರು ಗಣೆಯನ್ನು ಈ ಕಿಟಕಿಯ ಮೂಲಕ ತೂರಿಸಿ ಗದರಿಸಿದರೆ ಹೊರಹೋಗುತ್ತದೆ. ಹಾಗೇ ಮಾಡು."

ಅವನು ಬಿದಿರು ಗಣೆಯನ್ನು ತಂದು ಕಿಟಕಿಯ ಮೂಲಕ ತೂರಿಸಿ 'ಹುಷ್! ಹುಷ್!' ಎನ್ನುತ್ತ ಗದರಿಸಿದ. ತೆರೆದ ಬಾಗಿಲು ತೆರೆದಂತೆಯೇ ಇದೆ. ಅದು ಹೊರ ಬಾರದೆ ಅಲ್ಲಲ್ಲೇ ಸುತ್ತಾಡಿದನಂತರ ಮಂಗಳ ಮಾಯವಾಯಿತು. ಹೊರ ಹೋಗದೆ ಕಾಣೆಯಾದುದು ಅತ್ಯಾಶ್ಚರ್ಯ! ಒಳಗಡೆ ಸಣ್ಣ ತೂತು-ಬಿಲ ಯಾವುದೂ ಇರದ ಸ್ವಚ್ಛವಾದ ಮೊಜಾಯಿಕ್ ನೆಲ. ಅಂದಮೇಲೆ.....ಏನಾಶ್ಚರ್ಯ!

ನನ್ನ ದೇಹದಾದ್ಯಂತ ಅಚ್ಚರಿಯ ಆವೇಗ ಝಿಲ್ಲದೆ ಹರಿದಾಡಿತು.

* * * *

ಸುತ್ತಮುತ್ತಲೂ ಗಿಡುಮರಗಳ ಸುಂದರ ಕಾಂತಾರ. ಹಚ್ಚ ಹಸುರಿನ ಸಾಗರೋಪಮ ವೈಭವ. ಅರುಣರಾಗದಿಂದ ರಂಜಿತವಾದ ದಿಗ್ ದಿಗಂತಗಳ ಮಹಾಸೀಮೆ. ಬೆಳಗಿನ ಶೀತಲ ಶಾಂತ ವಾತಾವರಣ. ಅರುಣ ಬಿಂಬ ಮೆಲ್ಲಮೆಲ್ಲನೆ ಮೇಲೇರುತ್ತಿದೆ.

ಸಮಾಧಿ ಬಳಿಯ ತೋಟದಂಚಿನ ಕಲ್ಲು ಬಂಡೆಯ ಮೇಲೆ ಕುಳಿತು ಟೇಪ್ ರೆಕಾರ್ಡರನ್ನು ಸ್ವಿಚ್ ಹಾಕಿದೆ. ಪಕ್ಷಿಗಳ ರಾಗಮಾಲಿಕೆಯ ಸ್ವಚ್ಛಂದ ಸುಪ್ರಭಾತದ ಮೊಳಗು ಗಿಡಮರಗಳಲ್ಲಿ. ಒಮ್ಮೊಮ್ಮೆ ಜೋರಾಗಿ ಗಾಳಿ ಬೀಸಿದಾಗ ಮಾತ್ರ ಮರ್ಮರ ಸದ್ದು ಕೇಳಿಬರುತ್ತದೆ. ಅದು ವಿನಾ ಮತ್ತಾವ ಸದ್ದೂ ಇಲ್ಲ. ಟೇಪ್ ಓಡುವವರೆಗೂ ಅಲ್ಲಿಯೇ ಕುಳಿತಿದ್ದು ಅನಂತರ ಸಮಾಧಿಯ ಬಳಿಗೆ ಬಂದೆ. ಆಗಲೇ ಒಂದೊಂದು ಗರಿಕೆಯ ಹುಲ್ಲು ಮೊಳೆಯ ತೊಡಗಿತ್ತು ಅದರಮೇಲೆ. ಹಸಿ ಮಣ್ಣು ಸಹ ಒಣಗಿ ಹೋಗಿ ಹುಲ್ಲೆಸಳು ಜೀವನೀ ಶಕ್ತಿಯ ವಿಜಯ ಘೋಷಣೆ ಮಾಡುತ್ತಿದೆ. ನಾನು ಕೆಲವು ಬಿಡಿ ಹೂಗಳನ್ನು ಸಮಾಧಿಯ ಮೇಲಿಟ್ಟು ವಂದನೆ ಸಲ್ಲಿಸಿ ಅಲ್ಲಿಂದ ಹೊರಟೆ. ದರುಗೆಲೆ, ಒಣಕಡ್ಡಿ, ಪುಷ್ಪದಳ, ಪುಷ್ಪರೇಣುಗಳಿಂದ ಚಿತ್ರವಿಚಿತ್ರವಾದ ವನಭೂಮಿ. ಹಸುರು ಹುಲ್ಲಿನ ರನ್ನಗಂಬಳಿಯ ಮೇಲಣ ಚಿತ್ರದಂತೆ ಸತ್ಯ ಸುಂದರವಾಗಿ ಮೈದಳೆದ ಮನ ಮೋಹನೀಯ ದಾಣ.

ಮನೆಗೆ ಬಂದೆ. ಸುಮಿತ್ರ ಬೆಳಗಿನ ಉಪಹಾರದ ತಯಾರಿಕೆಯಲ್ಲಿ ಮುಳುಗಿದ್ದಳು.

ನಾನು ಉಪಹಾರ ಮುಗಿಸಿ ದಿನಚರಿಯಲ್ಲಿ ಮನವಿಟ್ಟೆ. ಮಧ್ಯಾಹ್ನದ ವರೆವಿಗೂ ಬಿಡುವು ದೊರೆಯಲಿಲ್ಲ. ಊಟವಾದನಂತರ ನಾನು ಅರ್ಧಶಯನಾವಸ್ಥೆಯಲ್ಲಿ ಮಂಚದಮೇಲೊರಗಿ, ಪುಸ್ತಕ ಪಠಣದೊಂದಿಗೆ ಟೇಪ್ ರೆಕಾರ್ಡರ್ ಸ್ವಿಚ್ ಒತ್ತಿದೆ. ಪಕ್ಷಿ ಸಮಾಜದ ಪ್ರಾತಃಮಂಗಳಧಾರೆ ಕರ್ಣಾನಂದಕರವಾಗಿ ಹೊಮ್ಮತೊಡಗಿತು. ಸ್ವಲ್ಪ ದೂರ ಟೇಪು ಓಡಿದ ಮೇಲೆ ಅರೆ! ಅದರಲ್ಲಿ ಸಂಗೀತ! ಎಂತಹ ಆಶ್ಚರ್ಯ?

"ನಾನು ಅತ್ತಲೇ ಗಮನವಿಟ್ಟೆ.
ಅಧರಂ ಮಧುರಂ ವದನಂ ಮಧುರಂ
ನಯನಂ ಮಧುರಂ ಹಸಿತಂ ಮಧುರಂ
ಹೃದಯಂ ಮಧುಗಂ ಗಮನಂ ಮಧುರಂ
ಮಧುರಾಧಿಪತೇಃ ಅಖಿಲಂ ಮಧುರಂ"

ಅಮ್ಮ ಆಗಾಗ ಹಾಡಿಕೊಳ್ಳುತಿದ್ದ ಆ ಮಧುರತರ ಸಂಗೀತ ಈಗ ಈ ಟೇಪಿನಲ್ಲಿ ಮೂಡಿದುದಾದರೂ ಹೇಗೆ? ನಾನು ಮತ್ತೆ ಆಲೈಸಿದೆ ನಿಜವಾಗಿಯೂ ಅಮ್ಮನದೇ ಕಂಠ! ಅದೇ ಮಧುರ ಸಂಗೀತ!

"ಸುಮಿತ್ರಾ....ಸುಮಿತ್ರಾ!"

ಅವಳು ಒಳಗಿಂದಲೇ ಓಗೊಟ್ಟಳು.

"ಬಾಯಿಲ್ಲಿ.....!"

ಅವಳು ಬಂದೊಡನೆಯೇ ಆ ಟೇಪನ್ನು ಆಲೈಸಲು ಹೇಳಿದೆ.

"ಅಯ್ಯೊ! ನಿಜವಾಗಿಯೂ ಹೌದು ಅಮ್ಮನದೇ ಕಂಠ! ಅವರು ಈ ಸಂಗೀತವನ್ನು ಸದಾ ಹಾಡುತಿದ್ದರು. ಅವರಿಗೆ ಇದು ಬಲೂ ಪ್ರಿಯವಾದ ಸಂಗೀತ! ಈ ಟೇಪ್ ನಮಗೇ ಇರಲಿ. ದಯವಿಟ್ಟು ಕೊಡಬೇಡಿರಿ...." ಎನ್ನುತಿದ್ದಾಗಲೇ ಕಣ್ಣುಗಳಲ್ಲಿ ನೀರಾಡಿತು. ಕಣ್ಣುಗಳನ್ನು ಕರವಸ್ತ್ರದಿಂದ ಒರಿಸಿಕೊಂಡಳು.

ನನಗೂ ಆಶ್ಚರ್ಯ–ಸಂಕಟಗಳು ಒಮ್ಮೆಲೇ ಮೂಡಿ ಮನಃಪ್ರಾಣಗಳನ್ನು ಮುತ್ತಿದುವು.

ಅಮ್ಮ ಉತ್ತಮ ಸಂಗೀತಗಾರ್ತಿ. ಅವರು ಹಾಡಿದ ಟೇಪ್‌ಗಳೂ ಇವೆ. ಆದರೆ, ಇದು ತುಂಬಾ ವಿಶೇಷ. ದಿನವೂ ದೇವರ ಪೂಜೆಯಲ್ಲಿ ಹಾಡಿಕೊಳ್ಳುತ್ತಿದ್ದ ಅತಿ ಪ್ರಿಯವಾದ ಸಂಗೀತ. ಬಹುಶಃ ಅವರ ಆತ್ಮ ಈಗಲೂ ಮೌನಗತಿಯಲ್ಲಿ ಹಾಡಿಕೊಳ್ಳುತ್ತಿದೆಯೋ ಏನೋ ....!

"ನೀವು ಟೇಪ್ ಮಾಡುವಾಗ ಈ ಧ್ವನಿ ನಿಮಗೆ ಕೇಳಿಸಲಿಲ್ಲವೇ ?"

"ಇಲ್ಲ....ನನಗೇನೂ ಗೊತ್ತೇ ಇಲ್ಲ. ಈಗಲೇ ನನಗೆ ತಿಳಿದುಬಂದುದು."

"ಬಹಳ ಆಶ್ಚರ್ಯ.....ಪರಮಾಶ್ಚರ್ಯ !"

ಪಕ್ಷಿಗಳ ಕಲಕಂಠಧಾರೆಯೊಂದಿಗೇ ಸಂಗೀತಧಾರೆಯ ಮಧುರ ಧ್ವನಿ ಕ್ಷೀಣಗತಿಯಲ್ಲಿ ಹರಿದಿದ್ದರೂ ಅಮ್ಮನ ಧ್ವನಿ ಎಂಬುದು ಮಾತ್ರ ಸುಸ್ಪಷ್ಟ. ಅದರಲ್ಲಿ ಕಿಂಚಿತ್ತೂ ಅನುಮಾನ ಇಲ್ಲವೇ ಇಲ್ಲ. ದೇಹಾದ್ಯಂತ ರೋಮಾಂಚಿತನಾದೆ. ಏನೋ ಒಂದು ಬಗೆಯ ದಿಗ್ಭ್ರಾಂತತೆ ಮನಃಕಲ್ಪವನ್ನು ಮುಸುಗಿತು. ಅಮ್ಮನ ಆತ್ಮ ಪರಮಾತ್ಮನಾದ ಮಧುರಾಧಿಪತಿಯನ್ನು ಎಷ್ಟೆಷ್ಟು ಪರಿಯಲ್ಲಿ ಆರಾಧಿಸುತ್ತಿದೆಯೋ ದೇವರಿಗೆ ಗೊತ್ತು !

ನನ್ನ ಹೃದಯ ಭಾರಭಾರವಾಯಿತು. ಆ ಟೇಪನ್ನು ಪುನಃಪುನಃ ಕೇಳಿದೆ. ದನಿ ಕ್ಷೀಣಿತವಾಗಿರುವುದರಿಂದ ಎಲ್ಲಿ ಅಳಿಸಿ ಹೋಗುವುದೋ ಎಂಬ ಭಯವೂ ಇದ್ದುದರಿಂದ ಅದನ್ನು ಹಾಗೆಯೇ ಭದ್ರಪಡಿಸಿಟ್ಟೆ.

ಮೂರುದಿನಗಳಿಂದ ಹೊರಹೋಗಿರಲಿಲ್ಲ. ಇಂದು ಥಾಂ ನದಿಯ ಮಧ್ಯೆ ನಿರ್ಮಿತವಾಗಿರುವ ಗಾಂಧೀ ಸ್ತೂಪಕ್ಕೆ ಹೋಗುವಾಗ ಟೇಪ್‌ರೆಕಾರ್ಡರನ್ನೂ ತೆಗೆದುಕೊಂಡು ಹೋದೆ. ಅಖಂಡ ಭಜನೆ ನಡೆಯುತ್ತಿತ್ತು. ನಾನೂ ಭಜನೆಯಲ್ಲಿ ಭಾಗವಹಿಸಿದೆ. ಅಲ್ಲಿನ ಕಾರ್ಯಕಲಾಪಗಳು ಪೂರೈಸಿದನಂತರ ನನ್ನ ಟೇಪ್ ರೆಕಾರ್ಡರನ್ನು ಸ್ವಿಚ್ ಆನ್ ಮಾಡಿದೆ. ಎಲ್ಲರೂ ಆ ಸಂಗೀತವನ್ನು ಕೇಳಿ ಆಶ್ಚರ್ಯವಿಮೂಕರಾದರು. ಅದು ಒಂದು ವೇಳೆ ನನ್ನ ಟೇಪೇ ಆಗಿದ್ದಲ್ಲಿ ಅಮ್ಮನ ಸಂಗೀತ ಎಂದಾದರೂ ರೆಕಾರ್ಡಾಗಿರಬಹುದು ಎನ್ನಬಹುದಾಗಿತ್ತು. ಇದು ನರಹರಿಯದಾದುದರಿಂದ ಯಾರೊಬ್ಬರಿಗೂ ಏನೆಂಬುದನ್ನು ಊಹಿಸಲು ಆಗಲಿಲ್ಲ.

* * * *

ಇಂದಿನ ನನ್ನ ಮನಸ್ಥಿತಿಯನ್ನು ಹೀಗೆ ಎಂದು ನಿರೂಪಿಸುವುದು ಕಷ್ಟವೇ. ಸುಖದುಃಖಗಳಿಂದ ಸಮ್ಮಿಳಿತವಾದ ಚಿತ್ತಪ್ರವೃತ್ತಿಗೆ ಶಾಂತಿ–ಅಶಾಂತಿಗಳ ಪರಿಭೇದ ತಿಳಿಯದಷ್ಟು ಜಡತ್ವ ಅಥವಾ ಆಲಸ್ಯ ಅಥವಾ ಮತ್ತಾವುದೋ ಮೈಮನಗಳನ್ನು ಹಿಡಿಮುರಿಗಟ್ಟಿದಂತೆ ಜಗದ್ವ್ಯಾಪಾರದ ಅರಿವೇ ಇಲ್ಲ.... ಇಡೀ ದಿನ ಹೀಗೆಯೇ ಉರುಳಿಹೋಯಿತು. ಅನಂತರ ಅಮ್ಮನ ಕೋಣೆಯಲ್ಲೂ, ಸಮಾಧಿಯ ಸಮೀಪದಲ್ಲೂ ಖಾಲಿ ಟೇಪ್ ಗಳಿಟ್ಟು ರೆಕಾರ್ಡ್ ಮಾಡಿದೆ. ಫಲಿತಾಂಶ ಸೊನ್ನೆ. ಆಗಲೂ, ಅಷ್ಟಕ್ಕೇ ಸೋಲದೆ ದಿನವೂ ಸಮಾಧಿಯ ಬಳಿ ನಾಲ್ಕಾರು ಸಲ ಪ್ರಯತ್ನಿಸಿದೆ. ಆದರೂ ಸಫಲತೆ ಮೂಡಲಿಲ್ಲ. ಒಂದು ತಿಂಗಳಿಂದ ಸ್ವಲ್ಪಸ್ವಲ್ಪವಾಗಿ ಮರೆಯುತ್ತ ಬಂದಿದ್ದ ಅಮ್ಮನ ಚಿತ್ರ ಈ ಘಟನೆಯಿಂದ ಪುನರ್ಜೀವಿತವಾಯಿತು.

ಈ ದಿನ ನರಹರಿಯ ಜೀಪ್ ಆಗಮಿಸಿತು. ಅವನು ಬರಬರುತ್ತಲೇ ಅಂದ,

"ನಿನ್ನಂತಹ ಪುಣ್ಯಜೀವಿ....ಇನ್ನೊಬ್ಬನಿಲ್ಲ!"

"ಏಕೆ....?"

"ಅಹಹ! ಇಂಥ ಎಸ್ಟೇಟ್ ಎಷ್ಟು ಮಂದಿಗಿದೆ ಹೇಳು?"

"ಇದೆ.....ಇದೆ,

"ಎಷ್ಟೋ ಮಂದಿಗಿದೆ ....ಅವರೆಲ್ಲರೂ ಪುಣ್ಯವಂತರೇ ಎಂದು ಹೇಳುವುದರಲ್ಲಿ ಪೂರ್ಣ ಆತ್ಮಸಂತೋಷವಿದೆ. ಈ ಉದ್ಯೋಗ ಪವಿತ್ರ."

"ಖಂಡಿತ!"

ಅವನು ಒಳಬಂದ. ನಾನು ಟೇಪ್ ರೆಕಾರ್ಡರನ್ನು ಮುಂದಿಟ್ಟು ಅದರಲ್ಲಿ ಮೂಡಿದ ಸಂಗೀತವನ್ನು ತಿಳಿಯಪಡಿಸಿ ಸ್ವಿಚ್ ಅದುಮಿದೆ. ಅವನು ಮೈಯೆಲ್ಲಾ ಮನಸ್ಸಾಗಿ, ಕಿವಿಯಾಗಿ, ಕಣ್ಣಾಗಿ ಕೇಳತೊಡಗಿದ. ಟೇಪ್ ಮುಂದೆ ಹರಿದಂತೆ ಸಂಗೀತ ಲಹರಿ ಹರಿದು ಬಂತು. ಮೈಯೆಲ್ಲಾ ರೋಮಾಂಚಿತನಾದ ಅವನು, ಕಣ್ಮುಚ್ಚಿ ಭಾವೋದ್ವೇಗದಿಂದ ಆಲೈಸಿದ.

ರೋಮಹರ್ಷಕ–ಆತ್ಮಸಂಕಟಗಳನ್ನು ಒಂದಿಗೇ ಬೆಸೆಯುವ ಆ ಸಂದರ್ಭವನ್ನು ಬಣ್ಣಿಸಲು ಶಬ್ದಗಳಾದರೂ ಎಲ್ಲಿವೆ?"

"ಇದಕ್ಕೇನೆನ್ನುತ್ತೀ ?"

ಅವನು ಮೂಕವಿಸ್ಮಿತನಾಗಿದ್ದು ಅನಂತರ "ಬಹಳ ಆಶ್ಚರ್ಯ ಕಣಯ್ಯ ! ಧ್ವನಿಯಂತೂ ಅವರದೇ. ಅದರಲ್ಲಿ ಅನುಮಾನವಿಲ್ಲ."

"ನಾನಿದನ್ನು ಟೇಪ್ ಮಾಡಿದ್ದು ಸಮಾಧಿಯ ಬಳಿಯೇ. ಅನಂತರ ಎರಡೆರಡು ಬಾರಿ ಪ್ರಯತ್ನಿಸಿದೆ. ಸಫಲತೆ ಮೂಡಲಿಲ್ಲ.....ಇದೇನಾಶ್ಚರ್ಯ ಹೇಳು ?"

"ನನಗೂ ಇದು ಬಿಡಿಸಲಾಗದ ಕಗ್ಗಂಟು. ಎಲೆಕ್ಟ್ರಾನಿಕ್ಸ್ ತಜ್ಞರ ಬಳಿ ಕೊಟ್ಟು ಪರೀಕ್ಷಿಸುವೆ. ನೋಡೋಣ. ಏನಾದರೂ ಸುಳಿವು ತಿಳಿಯುತ್ತೊ....."

ಅವನು ಹಾಗೆಂದರೂ ನಮ್ಮಿಬ್ಬರಿಗೂ ಅದರ ಸಫಲತೆಯ ಬಗ್ಗೆ ಅನುಮಾನವೇ....

"ಬಹುಶಃ ಇದು ನಿಮ್ಮ ನಿಮ್ಮ ಆಂತರಂಗಿಕ ಸಂಪ್ರೀತಿ ಇರಬಹುದೇನೋ ಎನಿಸಿದರೂ ಅದು ಸಂದೇಹವೇನೂ ಅಲ್ಲ. ಭಕ್ತಿರಸಸ್ಫುರಣವಾದುದರಿಂದ ನಾನೇನೂ ಹೇಳಲಾರೆ. ಅಂತೂ ಆಶ್ಚರ್ಯಾತಿಆಶ್ಚರ್ಯ! ಗೂಢಾತಿಗೂಢ !" ಎಂದ ಆಶ್ಚರ್ಯವಿಸ್ಫೃತನಯನಗಳಿಂದ ನೋಡುತ್ತ.

"ಅಲ್ಲವೇ....."

"ನಡೆ, ನಾವು ಇಂದೇ ಎಲೆಕ್ಟ್ರಾನಿಕ್ಸ್ ತಜ್ಞರ ಬಳಿಗೆ ಹೋಗೋಣ."

ಅವನ ಮಾತಿಗೆ ಒಪ್ಪಿ ನಾನು ಸುಮಿತ್ರೆಯೊಡನೆ ಅವನೊಂದಿಗೆ ಜೀಪು ಹತ್ತಿದೆ. ನಾವು ನೇರವಾಗಿ ಹೋದುದು ಎಲೆಕ್ಟ್ರಾನಿಕ್ಸ್ ತಜ್ಞರ ಬಳಿಗೆ.

ನಮಗಲ್ಲಿ ತಿಳಿದುಬಂದುದು ಸೊನ್ನೆ. ಪ್ರಕೃತಿಯ ಮುಂದೆ ನಮ್ಮ ಆಟವೆತ್ತ ?



# ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೧) ಜೀವನಗಂಗಾ
೨) ಡಾ|| ಅಘೋರ
೩) ಡಾ|| ಕಮಲೇಶ್
೪) ವಂದೇ ಮಾತರಂ
೫) ಅನಂತಾನಂತದೆಡೆಗೆ

(ಕಥಾ ಸಂಕಲನ)

೬) ಶ್ರೀಮುಖಿ
೭) ಬಹುರತ್ನಾವಸುಂಧರಾ
೮) ರತ್ನಗರ್ಭಾವಸುಂಧರಾ
೯) ವೈಶಾಖೀ ಪರ್ವ
೧೦) ಫಾಲ್ಗುಣೀ ಪರ್ವ

(ಕವಿತಾ ಸಂಕಲನ)

೧೧) ಪೂಜಾವಸಾನ ಸಮಯೇ....!
೧೨) ಧ್ಯಾನಾವಸಾನ ಸಮಯೇ....!

(ಪೌರಾಣಿಕ ನಾಟಕ)

೧೩) ಪುಣ್ಯಾಪಯೋನಿಧಿ
೧೪) ಪುಣ್ಯಾಭಿಸಾರ

(ಸಾನೆಟ್ಟುಗಳು)

೧೫) ತರಂಗಿಣಿ

(ಇವುಗಳ ಪ್ರತಿಗಳು ಮುಗಿದಿವೆ)

(ಕಥಾ ಸಂಕಲನ)

ತಿದ್ದಿದ ಎರಡನೆಯ ಮುದ್ರಣ

೧೬) ರಮಣೀಮಣಿ

೧೭) ಲಿಯೋನಾ

೧೮) ಶ್ರೀಹರ್ಷಲಾ

೧೯) ಸುಧಾಮಣಿ (ಅಚ್ಚಿನಲ್ಲಿ)

# ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೨೦) ಮನೋನ್ಮಣಿ

೨೧) ಸಂತ್ರಾಸಿನಿ

೨೨) ಆಸೆಯ ಸುಳಿಯಲ್ಲಿ

(ಕವಿತಾ ಸಂಕಲನ)

೨೩) ಗಗನ ಕುಸುಮ

೨೪) ಜೀವನ ಕುಸುಮ

೨೫) ಕಸ್ತೂರಿ ಮಾಲಿಕಾ

೨೬) ಮಂದಾರ ಮಾಲಿಕಾ

೨೭) ಚಂಪಕ ರಾಜಿ

೨೮) ನಾದ ಬಿಂದು

೨೯) ವಿಜಯ ಗಾಥಾ

೩೦) ಗಾನತೀರ್ಥ

೩೧) ಬಕುಳ ರಾಜಿ (ಅಚ್ಚಿನಲ್ಲಿ)

೩೨) ಕಲ್ಯಾಣ ಭಾರತಿ (ಅಚ್ಚಿನಲ್ಲಿ)

(ಸಂಜೀವನ ಕಾವ್ಯ)

೩೩) ರಾಗಾನುರಾಗಿಣಿ

೩೪) ಉತ್ತರೋತ್ತರಣಿ

೩೫) ಮಂಗಳ ಭಾರತಿ

(ಗದ್ಯ ಕಾವ್ಯ)

೩೬) ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೩೭) ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೩೮) ದೂರ ದೇಶದಲ್ಲಿ

೩೯) ಬೆಳದಿಂಗಳ ರಾತ್ರಿ

೪೦) ವಿಶೇಷ ಸುದ್ದಿ

೪೧) ರಂಗನ ಸಾಹಸ

೪೨) ಓಹಿಯೋಜ ಸರೋವರ

೪೩) ಕೌಶಿಕನ ಗೊಂಬೆ (ಅಚ್ಚಿನಲ್ಲಿ)

---

ಲಕ್ಷ್ಮೀ ಪ್ರಕಾಶನ

7, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು-560 025